# ನನ್ನ ಗೀತಗಳು

ಶ್ರೀ. ಶಂ. ಬಾ. ಜೋಶಿಯವರ ಮುನ್ನುಡಿಯೊಂದಿಗೆ

" ಗೀತಾಪ್ರಿಯ "

ಪ್ರಕಾಶಕರು :

ಸಾಧನ ಮುದ್ರಣಾಲಯ, ಧಾರವಾಡ

# ಅರಿಕೆ

ಈ ಕವನ ಸಂಗ್ರಹಕ್ಕೆ ಒಂದು ಮುನ್ನುಡಿಯನ್ನು ಬರೆದುಕೊಡ ಬೇಕೆಂದು ನನ್ನ ಮಿತ್ರರಾದ ಶ್ರೀ. ಶಂ. ಬಾ. ಜೋಶಿ ಅವರನ್ನು ಕೇಳಿದೆ. ಅವರು ಒಪ್ಪಿಕೊಂಡು ಶ್ರಮವಹಿಸಿ ತುಂಬಾ ಸೊಗಸಾದ ಒಂದು ಮುನ್ನುಡಿಯನ್ನು ಬರೆದುಕೊಟ್ಟಿದ್ದಾರೆ. ಅದಕ್ಕಾಗಿ ಅವರಿಗೆ ತುಂಬಾ ಉಪಕೃತನಾಗಿದ್ದೆನೆ.

ಓದುಗರಿಗೆ ಪರಿಚಯವಿದ್ದ ಲೇಖಕನು ಪರಿಚಯವಿಲ್ಲದ ಹೊಸ ಲೇಖನ ಪರಿಚಯವನ್ನು ಮಾಡಿಕೊಟ್ಟು ಓದುಗರು ವಿಶ್ವಾಸವಿಡುವಂತೆ ಮಾಡುವದೇ ಮುನ್ನುಡಿಯ ಕೆಲಸ. ಇದು ಶ್ರೀ. ಶಂ. ಬಾ. ಜೋಶಿಯವರ ಮುನ್ನುಡಿಯಿಂದ ಚನ್ನಾಗಿಯೇ ಆಗಿದೆಯೆಂದು ನನಗನಿಸುತ್ತದೆ. ಅದೇಕೆ? ಒಂದು ತೂಕ ಹೆಚ್ಚಾಗಿಯೇ ಆಗಿದೆ. ಇದಕ್ಕೆ ಕಾರಣ—ಪರಸ್ಪರ ಆತ್ಮೀಯತೆ. ಶ್ರೀ. ಶಂ. ಬಾ. ಜೋಶಿಯವರು ಮುನ್ನುಡಿಯಲ್ಲಿ ನನ್ನ ವಿಷಯವಾಗಿ ಬರೆದ ಮಾತುಗಳೆಲ್ಲ ನನ್ನ ಜೀವನದ ಮುಂದೆ ನಾನು ಇರಿಸಿಕೊಂಡಿರುವ ಗುರಿ. ನನ್ನ ಕೈಲಾದಮಟ್ಟಿಗೂ ನಾನು ಆ ಗುರಿಯನ್ನು ಸಾಧಿಸಲು ಹೆಣಗುತ್ತೇನೆ.

ಈ ನನ್ನ ಕವನ ಸಂಗ್ರಹದಿಂದ ನನ್ನ ಪರಿಚಯ ಹೊಸದಾಗಿ ಆಗುವದಾದರೂ ಮುಂದೆ ಅದು ಸ್ನೇಹರೂಪವಾಗಿ ಫಲಿಸುವದೆಂದು ಆಶೆ ತಳೆದಿದ್ದೇನೆ. ಇದಕ್ಕೆಲ್ಲ ಓದುಗರ ಮೆಚ್ಚಿಕೆಯೇ ಕಾರಣ.

ನಾನು ಯಾರನ್ನೂ ಮೆಚ್ಚಿಸುವ ಸಾಹಸದ ಕೆಲಸಕ್ಕೆ ಕೈಹಾಕಿಲ್ಲ. ನನ್ನ ಮೆಚ್ಚಿಕೆಗೆ ಮಾತ್ರ ನಾನು ಪ್ರಯತ್ನಪಟ್ಟಿದ್ದೇನೆ. ನನ್ನ ಅಂತರಾತ್ಮನ ಮೆಚ್ಚಿಗೆಯೇ ನಾನು ‘ಬಯಸಿ ಬೇಡಿದ ಹಣ್ಣು’. ಇಲ್ಲಿ ಪ್ರಕಟವಾದ ಕವನಗಳೆಲ್ಲ ನನಗೆ ದೊರೆತ ಫಲಗಳು. ನನ್ನಂತಿರುವ ಇತರರಿಗೆ ಇವು ಮೆಚ್ಚಿಕೆಯಾಗಬಹುದೆಂಬ ಭರವಸೆಯಿಂದ ಇವುಗಳನ್ನು ಈಗ ಪ್ರಕಟಿಸುತ್ತಿದ್ದೇನೆ.

ಕವಿತೆಗಳನ್ನು ಬರೆಬರೆದಂತೆ ಓದಿತೋರಿಸುವ ವಾಡಿಕೆ ನನ್ನದು. ಓದಿದಂತೆ ಪ್ರೋತ್ಸಾಹನಕೊಟ್ಟು ಮುಂದೆ ಬರೆಯಲು ಉತ್ಸಾಹವನ್ನಿತ್ತ ನನ್ನ ಗೆಳೆಯರಿಗೆಲ್ಲ ನನ್ನ ವಂದನೆಗಳು.

ನಾನು ಕವಿತೆಗಳನ್ನು ಬರೆಯುವದಕ್ಕೆ ಕಾರಣರಾದ ಶ್ರೀ. ದ. ರಾ. ಬೇಂದ್ರೆಯವರಿಗೆ ಈ ನನ್ನ ಕವನ ಸಂಗ್ರಹವನ್ನು ಅರ್ಪಿಸಿದ್ದೇನೆ.

ಇದರಲ್ಲಿ ಪ್ರಕಟವಾದ ಕೆಲವು ಕವನಗಳು ಪ್ರಬುದ್ಧ ಕರ್ನಾಟಕ, ಜಯಂತಿ, ಜೀವನ ಪತ್ರಿಕೆಗಳಲ್ಲಿ ಈ ಮೊದಲೇ ಅಚ್ಚಾಗಿವೆ. ಇದಕ್ಕಾಗಿ ನಾನು ಆಯಾ ಪತ್ರಿಕೆಯ ಸಂಪಾದಕರಿಗೆ ನನ್ನ ಆದರದ ವಂದನೆಗಳನ್ನು ಅರ್ಪಿಸುತ್ತೇನೆ.

**ಗೀತಾಪ್ರಿಯ**



# ಮುನ್ನುಡಿ

ನನ್ನ ಗೆಳೆಯರಾದ ಶ್ರೀ ಶೇಷಗಿರಿರಾಯರು ರಸಿಕರು, ಸೌಂದರ್ಯೋಪಾಸಕರು, ಎಂದು ಅವರ ಮಿತ್ರಮಂಡಲಿಗೆಲ್ಲ ಚೆನ್ನಾಗಿ ಗೊತ್ತು. ಇವರಿಗೆ ಸಂಗೀತ, ಸಾಹಿತ್ಯದಲ್ಲಿ ತುಂಬ ಅಭಿರುಚಿ ಎಂಬುವನ್ನು ಅನೇಕರು ಬಲ್ಲರು. ಆದರೆ ಇವರೆ ಸ್ವತಃ ಕವಿಗಳೂ ಆಗಿರುವರೆಂಬುದು ಮಾತ್ರ, ಹಲವರಿಗೆ ಸೋಜಿಗವನ್ನುಂಟುಮಾಡದೆ ಇರದು.

ನಿಜವಾಗಿ, ಇದರಲ್ಲಿ, ಅಷ್ಟು ಸೋಜಿಗಬಡುವದಕ್ಕೆ ಕಾರಣವಿಲ್ಲ. ಏಕೆಂದರೆ, ಅಂತಃಕರಣದಲ್ಲಿ ಸಾರರೂಪದಿಂದ ಹಾಗೆ ಕವಿಯಾಗಿ ಇಲ್ಲದವನು ಬೇರೆ ಕಾವ್ಯರಸವನ್ನು ಸವಿಯಲು ಹೇಗೆ ತಾನೆ ಸಮರ್ಥನಾದಾನು? ಶ್ರೀ. ಶೇಷಗಿರಿಯವರು ತರುಣರಿದ್ದಾಗಲೆ ಕೆಲವು ದಿನ 'ಕಾವ್ಯಸೇವೆ' ಯನ್ನು ಮಾಡಿದ್ದಾರೆ. ೧೯೨೧ರಲ್ಲಿ ರಾಷ್ಟ್ರೀಯ ಶಾಲೆಯಲ್ಲಿ ಇದ್ದಾಗ ಶ್ರೀ. ಶೇಷಗಿರಿಯವರೂ ಅವರ ಗೆಳೆಯರೂ ಕೂಡಿ 'ಕಾವ್ಯಸೇವೆ' ಎಂಬ ಹೆಸರಿನ ಒಂದು ಕೈಬರೆಹದ ಪತ್ರಿಕೆಯನ್ನು ಹೊರಡಿಸಿದ್ದಾರೆ. ಸುವಿಖ್ಯಾತ ಕವಿಗಳಾದ ಶ್ರೀ ಬೇಂದ್ರೆಯವರಿಂದ ಸಾಹಿತ್ಯ ದೀಕ್ಷೆಯನ್ನು ಆ ಕಾಲಕ್ಕೆ ಹೊಂದಿದ್ದಾರೆ. ಬಳಿಕ ಲೋಕವಿಖ್ಯಾತ ಕವಿಗಳಾದ ಶ್ರೀ ರವೀಂದ್ರನಾಥ ಠಾಕುರರ ಅಡಿಯಲ್ಲಿದ್ದು ತಮ್ಮ ಜೀವನಕ್ಕೆ ಹೆಚ್ಚಿನ ಸ್ಫೂರ್ತಿಯನ್ನೂ ಪಡೆದಿದ್ದಾರೆ. ಆದುದರಿಂದ ಇನಿತೆಲ್ಲ ಪೂರ್ಣಸಂಸ್ಕಾರಗಳುಳ್ಳ ಶ್ರೀ ಶೇಷಗಿರಿಯವರ ಕವಿತೆಗಳು ಈವರೆಗೆ ಏಕೆ ಹೊರಗೆ ಬರಲಿಲ್ಲ ಎಂಬುದೇ (ಕವಿತೆಗಳು ಪ್ರಕಟವಾದುವು ಎಂಬದಕ್ಕಿಂತಲೂ) ಹೆಚ್ಚಿನ ಸೋಜಿಗದ ಸಂಗತಿಯಾಗಿದೆ!

ಶ್ರೀ ಶೇಷಗಿರಿಯವರು ವಿಭೂತಿ ಪೂಜಕರು. ಶ್ರೀಯುತರು ಎಲ್ಲಿಯೆ ಸ್ವಲ್ಪ ವಿಭೂತಿಮತ್ತ್ವವನ್ನು ಕಾಣಲಿ, ಅದಕ್ಕೆ ಮಾರುಹೋಗದೆ ಇರುವುದಕ್ಕೆ ಅವರಿಂದ ಆಗುವುದಿಲ್ಲ. ಮಹತ್ತು (ಹಿರಿಮೆ) ಹೀಗೆ ಅವರ ಹೃದಯವನ್ನು ಸೆಳೆದು ಮುಗ್ಧರನ್ನಾಗಿ ಮಾಡುವುದು. ನನ್ನ ಮಿತ್ರರ

ಈ ಸ್ವಭಾವವನ್ನು ನಾನು ಅವರ ಚಿಕ್ಕಂದಿನಿಂದಲೂ ಬಲ್ಲೆ. ಮಹತ್ತು-ವಿಭೂತಿಮತ್ವ-ವೈಭವ ಎಂದರೇ ಸೌಂದರ್ಯ. ಕೆಲವರನ್ನು ಒಂದೇ ಬಗೆಯ ಸೌಂದರ್ಯವು ತನ್ನೆಡೆಗೆ ಆಕರ್ಷಿಸಬಲ್ಲುದು. ಆದರೆ ಶ್ರೀ, ಶೇಷಗಿರಿಯವರನ್ನು ತನ್ನತ್ತ ಸೆಳೆಯದ ಸೌಂದರ್ಯದ ಪ್ರಕಾರವಿಲ್ಲ.

'ನಾಲ್ಪೇ ಸುಖಮಸ್ತಿ' ಎಂಬುದು ಶ್ರೀ ಶೇಷಗಿರಿಯವರ ಉಸಿರು. ಶ್ರೀಯುತರಿಗೆ ಸಣ್ಣಮಾತು ಸೊಗಸುವುದಿಲ್ಲ. ಏನಾದರೂ ಅದು ಹಿರಿದಾಗಬೇಕು ಎಂಬುದು ಅವರ ಹಂಬಲ. ಹಿರಿಗನಸುಗಳನ್ನು ಕಾಣುವುದರಲ್ಲಿ, ಕಟ್ಟುವುದರಲ್ಲಿ ಶ್ರೀ ಶೇಷಗಿರಿಯವರು ಗಟ್ಟಿಗರು. ನಾಡಿಗಾಗಿ ನಡೆವ ಹಿರಿಗೆಲಸದಲ್ಲಿ ತನ್ನಿಂದ ಏನಾದರೂ ಅಳಿಲು ಸೇವೆ ಸಲ್ಲಿಸಲು ಸಾಧ್ಯವಾದರೆ, ಅದು, ಬರಿ 'ಕವಿ' ಅಥವಾ 'ಸಾಹಿತಿ' ಎಂದೆನಿಸಿಕೊಂಬುದಕ್ಕಿಂತಲೂ ಹೆಚ್ಚು ಮಿಗಿಲೆಂದು ಶ್ರೀ ಶೇಷಗಿರಿರಾಯರು ತಮ್ಮೊಳಗಿನ ಕವಿಯನ್ನು ಹಿಂದಿರಿಸಿ ಹನುಮವೃತ್ತಿಯಿಂದ ಕೆಲವೊಂದು ಸಾರ್ವಜನಿಕ ಕೆಲಸದಲ್ಲಿ ಧುಮುಕಿದರು. ಅವರ ಹಿರಿಗನಸುಗಳಲ್ಲಿ ತಲ್ಲೀನರಾಗಿ ತುಂಬಿ ಶ್ರಮವಹಿಸಿ ಕೆಲಸ ಮಾಡಿದರು. ತಾವೇ ಸಾಹಿತಿಗಳೆಂದು ಮುಂದೆ ಬರುವ ಮಹತ್ವಾಕಾಂಕ್ಷೆಯನ್ನೂ ಬದಿಗಿರಿಸಿ, ಬೇರೆಯವರ ಸಾಹಿತ್ಯಕ್ಕೆ ಬೆಳಕುಕೊಡುವುದರಲ್ಲಿಯೆ ಸಂತೋಷಬಟ್ಟರು. ತಮ್ಮ ಅಂತರಂಗದೊಳಗಿನ ಸೌಂದರ್ಯವನ್ನು ಕಡೆಗಣಿಸಿ – ಅಥವಾ ಅದರ ಸಾಕಷ್ಟು ಅನುಭವವಿಲ್ಲದ್ದರಿಂದ — ಹೊರಗಣ ಅಂದದಿಂದ ಆಕರ್ಷಿತರಾಗಿ ಬಗೆಬಗೆಯ ಅನುಭವಗಳನ್ನು ಪಡೆದ ಕಾಲವು ಇದಾಯ್ತು.

ಲೋಕದ ಸಿಹಿ-ಕಹಿಗಳನ್ನುಂಡು, ಸುಖದುಃಖಗಳನ್ನು ಅನುಭವಿಸಿ, ಹೊಲಬು ಹೊಲ್ಲಗಳನ್ನರಿತು, ಅಂದ-ಅಸಡ್ಡೆಗಳನ್ನು ನಡೆನೋಡಿ ಮಾನವ ಜೀವವು ಒಂದು ಹದಕ್ಕೆ ಬರುತ್ತದೆ. ಸುಖ-ದುಃಖ ಅಥವಾ ಸೌಂದರ್ಯ-ಕುರೂಪತೆಗಳ ಆಕರ್ಷಣ-ಆಘಾತಗಳಿಂದ ಮಾನವನೊಳಗಿನ ಅನೇಕ ಸುಪ್ತಶಕ್ತಿಗಳು ಜಾಗೃತವಾಗುತ್ತವೆ. ಶ್ರೀ ಶೇಷಗಿರಿರಾಯರೂ ಈ ಮಾತಿಗೆ ಹೊರತಾಗಿಲ್ಲ; ನಡುವಿನ ಅವಧಿಯಲ್ಲಿ ನಿದ್ದೆಹೋದ ಕವಿತ್ವ ಶಕ್ತಿಯು ಇವರಲ್ಲಿ ಮರಳಿ ಜಾಗೃತವಾದುದೆ ಇದಕ್ಕೆ ಸಾಕ್ಷಿ. ಹೀಗೆ ಎಚ್ಚತ್ತ ಇವರ ಅಂತರಂಗದೊಳಗಣ ಕವಿಯು ಹಾಡಿದ

ಕೆಲವು ಹಾಡುಗಳೆ ಈ ಕವಿತಾಸಂಗ್ರಹ. ಆದುದರಿಂದ ಈ ಕವಿತೆಗಳಲ್ಲಿ ಅವರ ಮನಸಿನ ಸ್ಥಿತ್ಯಂತರಗಳ ಪಡಿನೆಳಲನ್ನು ಸಹಜವಾಗಿ ಕಾಣಬಹುದಾಗಿದೆ.

ಬಯಸಿ ಬೇಡಿದ ಹಣ್ಣು
ಬಾಯಿಯಲಿ ಬಿದ್ದಿರಲು
ನುಂಗು ನುಂಗದನು ನೀನುಗುಳ ಬೇಡ
ಸಿಹಿ ಇರಲಿ, ಕಹಿ ಇರಲಿ
ಹೇಗಾದರೂ ಇರಲಿ
. ನುಂಗು ನುಂಗದನು ನೀ ಹೆದರ ಬೇಡ

ಎಂದು ಮುಂತಾಗಿ, ಅವರು ಪೂರ್ವ ಸಂಕಲ್ಪದಿಂದ ದೊರೆತ ಹಣ್ಣಿನ (ಕಾಯಿ?) ರುಚಿಯನ್ನು ಸವಿದು ತಮ್ಮ ಜೀವಕ್ಕೆ 'ಪಾಲಿಗೆ ಬಂದುದೆಲ್ಲವು ಪಂಚಾಮೃತ; ಒಲ್ಲೆನೆನಬೇಡ; ಸ್ವೀಕರಿಸು; ಹಿತವು' ಎಂದು ಉಪದೇಶಿಸುತ್ತಲಿದ್ದಾರೆ.

ಬಾಳು ಇದ್ದರು ಬೆಳಿಗೆ ಇಲ್ಲದ
ಎನ್ನನೇಕವ ಮರೆತನು?
ಎನ್ನ ಬಾಳಗೆ ಬೆಳಿಗೆ ಈವ
ವಸಂತನೆಂದಿಗೆ ಬರುವನು?

ಎಂದು ಹಂಬಲಿಸಿ ದೇವನಲ್ಲಿ ಮೊರೆಯಿಟ್ಟಿದ್ದಾರೆ.

ಮೊದಲು ಕೈಕೊಂಡ ಕೆಲಸವು ಕನಸಿನಂತೆ ಕರಗಿ ಹೋಗಿ ಮುಂದೇನೆಂಬುದು ತಿಳಿಯದಾಗಿ,

ಲೋಕವೆಲ್ಲ ಕೈಯ ಬಿಟ್ಟಿರೆನಗೆ (ಇನ್ನು) ನೀನೆ ಆಸರ
ಮೂಕನಾಗಿ ನೂಕಲಾರೆ ಸಾಕು ಬಾಳು ಬೇಸರ ........
ಬಗೆಯ ಬಯಲು ಬಂಜೆಯಾಗಿ ಭೋರಿಡುತ್ತ ಬಿದ್ದಿದೆ
ನಗುವ ಜಗದ ಮಸಣವಾಗಿ ಹೊಗೆಯು ಮುತ್ತಿಕೊಂಡಿದೆ

ಎಂದು ಮುಂತಾಗಿ ಕಳವಳಿಸಿ ಕೀಸರಗೊಂಡು ತಮ್ಮ ಹುದುಗಿದ ದುಃಖವನ್ನು ತೋಡಿಕೊಂಡಿದ್ದಾರೆ, ಈ ಕುತ್ತಿನಿಂದ ಪಾರು ಮಾಡಲು ದೇವರನ್ನು ಬೇಡಿಕೊಂಡಿದ್ದಾರೆ.

ಓ ತಾಯಿ ಬರದೆ ಮಾಯೆ ಈಯೆ ಒಂದು ಹಾಡನು
ಕಾಯೆ ನಿನ್ನ ಕಂದನನ್ನು ಬಾಯಬಿಡುತ ಬಂದನು........

ಎಂಬ ಅವರ ಆರ್ತಪ್ರಾರ್ಥನೆಯು ವ್ಯರ್ಥ ಹೋಗಲಿಲ್ಲ. ಅವರಿಗೆ ದೊರೆತ ಈ ಕವಿತೆಯ ಸಿದ್ಧಿಯೆ ಅವರ ಆ ಪ್ರಾರ್ಥನೆಯ ಫಲ. ಅವರ ಈ ಅನುಭವವು 'ಸುಹೃದ-ಹೃದಯ', 'ಒಂದು ಹಾಡು', 'ಕರುಣೆ', 'ನನ್ನ ದಾರಿ', 'ನನ್ನ ದೀಪ' ಮುಂತಾದ ಕವನಗಳಲ್ಲಿ ಒಡಮೂಡಿ ನಿಂತಿದೆ.

ನೀನು ಮೆಚ್ಚಿ ಬರೆ, ನನ್ನ ಮನಸು ತೆರೆ, ನಂದನವನವಲ್ಲಿ
ಕಾನನವರಳಿ ಜೇನಿನ ಮಳೆಯು ಪ್ರೇಮಪಾಕವಲ್ಲಿ........
ದೇವ ನಿನ್ನಪಾರ ಕರುಣೆಗಾವ ನೆಲೆಯ ಕಾಣಲಿ!
ಈವ ಶಕ್ತಿ ಈಯುತಿರಲಿ ಭಕ್ತಿಭಾವ ಬೆಳೆಯಲಿ!........

ನೀನು ಶಿಲ್ಪಿ ನಾನು ಶಿಲೆಯು
ನೀನೆ ಕಡಿದು ಮೂಡಿಸಿರಲು
ನಿನ್ನ ಕಲೆಗೆ ಕುಂದು ಬರದು
ನಿನ್ನ ಸೃಷ್ಟಿ ಸಾವು ಇರದು........
ಅಳಿವು ಇರದು ನಿನ್ನ ಕೃತಿಗೆ........
ನಿನ್ನದೊಂದೆ ಕೃತಿಯು ನಾನು........

ಎಂಬ ಈ ನುಡಿಗಳಲ್ಲಿ ಮೊದಲಿನ ನಿರಾಶೆಯ ಮನದ ಕರಕರೆಯೆಲ್ಲವೂ ಮಾಯವಾಗಿ, ದೇವನ ಅಪಾರ ಕರುಣೆಯು ಬಂದ ಅನುಭವವು ಎದ್ದು ಕಾಣುತ್ತಿದೆ. ಇಷ್ಟೆ ಅಲ್ಲ, ಇನ್ನು ಕುತ್ತಿನಿಂದ ತಾನು ಪಾರಾದುದನ್ನು ಸೂಚಿಸುವ 'ನನ್ನ ದೀಪ' ಎಂಬ ಪದ್ಯವು ಹಲವು ದೃಷ್ಟಿಯಿಂದ ಸುಂದರವಾಗಿದೆ.

ಬಟ್ಟ ಬಯಲ ನೆಲದಲಿ
ಇಟ್ಟ ನನ್ನ ದೀಪವ
ಗಾಳಿ ಬೀಸಿ ಬೀಸಿತು
ಮೇಲೆ ಮೋಡ ಕವಿದಿತು
ಮಳೆಯು ಕೂಡ ಸುರಿಯಿತು
ಮೇರೆದಪ್ಪಿ ಹರಿಯಿತು

ಆದರೆನ್ನ ದೀಪವು
ಆರಲಿಲ್ಲ ಉಳಿಯಿತು!

ಇಲ್ಲಿ ದೀಪದ ರೂಪಕದಿಂದ ಹೇಳಿದ ತಮ್ಮ ಜೀವನದ ಅನುಭವವನ್ನು ಇದಕ್ಕೂ ಉಚಿತವಾಗಿ ಬಿಡಿಸಿ ಹೇಳುವುದೆ ಅಶಕ್ಯ, ಎನಿಸುವಷ್ಟು ಚೆಂದವಾಗಿ ವಿವರಿಸಿದ್ದಾಗಿದೆ. ಆದರೇನು? ಒಂದು ಕುತ್ತಿನಿಂದ ದಾಟುವುದರೊಳಗಾಗಿ, ಮಾನವನು ಜೀವದಿಂದ ಇರುವವರೆಗೂ, ಇನ್ನೊಂದು ಕುತ್ತು 'ಆ' ಎಂದು ಬಾಯ್ತೆರೆದು ಅವನೆದುರು ನಿಂತೇಬಿಟ್ಟಿರುತ್ತದೆ. ಕವಿಯು ತನ್ನ ಆ ಮತ್ತೊಂದು ಅಂಜಿಕೆಯನ್ನೂ ಸೂಕ್ಷ್ಮವಾಗಿ ಮುಂದಿನ ಪದ್ಯದಲ್ಲಿ ಸೂಚಿಸಿದ್ದಾನೆ.

ಆದರೇನು? ನೀವು ನೊಂದು
ಬಿಟ್ಟ ಬಿಸಿಯ ಉಸಿರನು
ತಾಳಿಕೊಳುವ ತ್ರಾಣವದಕೆ
ಬಾರದೆಂದು ಆನಿಸಿತು
ಬಟ್ಟ ಬಯಲ ನೆಲದಲಿ
ಇಟ್ಟೆ ನನ್ನ ದೀಪವ.

ಎಂದು ಹೇಳಿದ್ದಾನೆ.

ಶ್ರೀ ಶೇಷಗಿರಿರಾಯರು ತಮ್ಮ ಈ ಕವನ ಸಂಗ್ರಹಕ್ಕೆ **'ನನ್ನ ಗೀತಗಳು'** ಎಂದು ಹೆಸರನ್ನಿಟ್ಟಿದ್ದಾರೆ. 'ನನ್ನ ಗೀತಗಳು' ಎಂದರೆ ಇನ್ನೊಬ್ಬರವು ಅಲ್ಲ, ಎಂದರ್ಥವಲ್ಲ. ಬೇರೆ ಬೇರೆ ದೇಹದಲ್ಲಿದ್ದರೂ ಜೀವನಿಗೆ ಬರುವ ಅನುಭವಗಳು ಬಹುತರ ಪ್ರಸಂಗಗಳಲ್ಲಿ ಒಂದೇ ಬಗೆಯವಾಗಿರುತ್ತವೆ. ಆದುದರಿಂದ ಇವು ಎಲ್ಲರ ಗೀತಗಳೂ ಅಹುದು. ಆದಕಾರಣ 'ನನ್ನ ಗೀತಗಳು' ಎಂಬುದಕ್ಕಿಂತಲೂ ಇದಕ್ಕೆ 'ಆತ್ಮ ಗೀತಗಳು' ಎಂದಿದ್ದರೆ ಹೆಚ್ಚು ಚೆನ್ನಾಗಿದ್ದಿತು. ತನ್ನ ಅನುಭವವನ್ನು (ಎಲ್ಲರಿಗೂ) ತಮ್ಮ ಅನುಭವವೆನಿಸುವಂತೆ ಬರೆದಿರುವುದೇ ನಿಜವಾದ ಸಾಹಿತ್ಯ. ಶ್ರೀ ಶೇಷಗಿರಿರಾಯರ ಕವನಸಂಗ್ರಹವು ಈ ಜಾತಿಗೆ ಸೇರಿರುವುದರಿಂದ ಇದು ಉತ್ತಮ ಸಾಹಿತ್ಯವಾಗಿದೆಯೆಂದು ಧೈರ್ಯವಾಗಿ ಹೇಳಬಹುದು.

ತನ್ನನ್ನು ತಾನು ಕಂಡುಕೊಳ್ಳುವ ಹಂಬಲವು ಮಾನವನಿಗೆ ಎಂದಿನಿಂದಲೂ ಇದ್ದುದೇ. ಈ ಹಂಬಲದ ಮೂಲಕವಾಗಿಯೆ ಕನ್ನಡಿಗೆ ಮನೆಮನೆಗಳಲ್ಲಿಯೂ ಇಂಬುದೊರೆತಿದೆ; ಈ ಹಂಬಲದ ಮೂಲಕವಾಗಿಯೆ ಸಾಹಿತ್ಯವು ಲೋಕಕ್ಕೆ ಇಷ್ಟೊಂದು ಅಚ್ಚುಮೆಚ್ಚಿನದಾಗಿದೆ. ಕನ್ನಡಿಯಲ್ಲಿ ಮಾನವನ ಬಾಹ್ಯರೂಪವು ಕಾಣಬಹುದಾಗಿರುವಂತೆ ಕಾವ್ಯ-ಸಾಹಿತ್ಯದಲ್ಲಿ ಆತನ ಅಂತರಂಗದ ಚಿತ್ರವನ್ನು ನೋಡಲು ದೊರೆಯುತ್ತದೆ. ಸಾಹಿತ್ಯವು ಮಾನವನ ಇರುವನ್ನು ತೋರುವ ' ಆದರ್ಶ '. ಆದರ್ಶವು ಇದ್ದುದನ್ನು ತೋರಿ, ಇರಬೇಕಾದುದನ್ನು ಸೂಚಿಸುತ್ತದೆ. ಕನ್ನಡಿಯು ಕೇವಲ ಇದ್ದುದನ್ನು ಮಾತ್ರ ಕಣ್ಣಿಗೆ ಹಾಕುತ್ತದೆ. ಇದರಂತೆ ಸಾಹಿತ್ಯದಲ್ಲಿಯೂ 'ಕನ್ನಡಿ'ಯ ಸಾಹಿತ್ಯ ಕೆಲವು; 'ಆದರ್ಶ' ಸಾಹಿತ್ಯ ಕೆಲವು. ಶ್ರೀ ಶೇಷಗಿರಿಯವರ ಈ ಕವನ ಸಂಗ್ರಹವು ಎರಡನೆಯ ಗುಂಪಿಗೆ ಸೇರಿದುದೆಂದು ಹೇಳಬಹುದು. ಹಿರಿಯ ಆದರ್ಶವನ್ನು ವ್ಯಕ್ತಪಡಿಸುವ 'ಬೆಳಕು–ಕತ್ತಲೆ' ಎಂಬ ಸುಂದರವಾದ ಕವನವನ್ನೋದಿ ಈ ಮಾತಿನ ಮನವರಿಕೆ ಮಾಡಿಕೊಳ್ಳಬಹುದು:

> ಇರುವುದು ಕತ್ತಲೆ ಬರುವುದು ಬೆಳಕು ನಮ್ಮಯ ಜಗದಲ್ಲಿ
> ಇರುವುದು ಬೆಳಕು ಬಾರದು ಕತ್ತಲೆ ಇಂತಹ ಜಗವೆಲ್ಲಿ!....
> ದೇವನ ದೇಹ ದೇವನ ಮನಸು ದೊರೆವ ಬಗೆಯ ದೋರು
> ದೇವನ ಹಾಡು ಹಾಡುತ ಹಾಡುತ ಮೇಲಮೇಲಕೇರು.

ಉದಾತ್ತವಾದ ಅರ್ಥ, ದಿವ್ಯವಾದ ಭಾವನೆ, ಉಚಿತವಾದ ರೀತಿಗಳಿಂದ ಮನೋಹರವಾದ ಈ ಕವನವು ಓದುಗರ ಮನಸಿನ ಮೇಲೆ ಅಚ್ಚೊತ್ತಿದಂತೆ ಮೂಡಿ, ಕಿವಿಯಲ್ಲಿ ಯಾವಾಗಲೂ ನಿನದಿಸದೆ ಇರಲಾರದು.

ಎಂತಹ ಅರಸಿಕನೆ ಇರಲಿ, ಜೀವನದ ಎರಡು ಮೆಟ್ಟಿಲನ್ನಾದರೂ–ಸಂಪೂರ್ಣ ಕವಿತೆಯಲ್ಲದಿದ್ದರೂ ಕವಿತೆಯಂತಹ—ಕೆಲವೊಂದು ನುಡಿಗಳು, ಕೊನೆಗೆ ಉದ್ಗಾರಗಳಾದರೂ ಎದೆ ಉಕ್ಕಿ ಹೊರಹೊಮ್ಮದೆ ಇರುವುದಿಲ್ಲ. ಆ ಎರಡು ಮೆಟ್ಟಿಲುಗಳೆಂದರೆ: ಹೊಸ ಹರಯದ ವಸಂತಕಾಲವೊಂದು. ತಿಳಿದ ಮನಸಿನ ಮಾಗಿಯ ಕಾಲವಿನ್ನೊಂದು. ಮೊದಲನೆಯದು

ಸೌಂದರ್ಯವೆ ನಮ್ಮನ್ನರಸುವ ಕಾಲ; ಎರಡನೆಯದು ನಾವು ಸೌಂದರ್ಯವನ್ನರಸುವ ಕಾಲ. ಚೆಲುವು ನಲಿವುಗಳು ಲೋಕವನ್ನೆಲ್ಲ ತುಂಬಿ ಹೊರಸೂಸಿ ಹರಿವ ಕಾಲವು ಒಂದು. ಒಮ್ಮೆ ಕಂಡುಕಾಣದಾಗಿರುವ ಚೆಲುವನ್ನು ಮತ್ತೆ ಪಡೆಯಲು ಹಂಬಲಿಸಿ ಹಾತೊರೆದು, ಊರ್ವಶಿಯನ್ನು ಕಳೆದುಕೊಂಡ ಪುರೂರವನಂತೆ, ಸೌಂದರ್ಯ ಸಾಕ್ಷಾತ್ಕಾರಕ್ಕಾಗಿ ಅಳಲಿ ತೊಳಲಿ ಬೆಂದು ನೊಂದ ನೋಂಪಿಯ ಕಾಲವು ಇನ್ನೊಂದು. ನಮ್ಮ ಹೊರಗಣ್ಣು ಸೆಳೆದು ಮನವನ್ನು ಹಿಗ್ಗಿಸುವ ಚೆಲುವು ಮೊದಲಿನದಾದರೆ, ಒಳಗಣ್ಣು ಅರಳಿಸಿ ಅರಿತಂತೆ ಹೆಚ್ಚು ಹೆಚ್ಚಿನ ಆನಂದವನ್ನೀವ ಚೆಲುವು ಎರಡನೆಯದಾಗಿದೆ.

ಈ ಕವಿತಾಸಂಗ್ರಹದಲ್ಲಿ ಮೊದಲನೆಯದಕ್ಕಿಂತ ಎರಡನೆಯ ಬಗೆಯ ಕವನಗಳೆ ಹೆಚ್ಚಾಗಿವೆ. 'ಕೌತುಕದ ಕನ್ಯೆ' ಇವರ ಮನಸ್ಸು ಸೆಳೆದಿಲ್ಲವೆಂತಲ್ಲ; '....ಗೆ' ಪ್ರಾರ್ಥಿಸಿ 'ಬಂದೊಮ್ಮೆ ನೋಡು ನಿನ್ನಯ ರೂಪವನ್ನಿಲ್ಲಿ' ಎನ್ನ ಮನದ ಕನ್ನಡಿಯಲ್ಲಿ ಎಂದು ಅವಳನ್ನು ಬೇಡಿಕೊಂಡಿಲ್ಲವೆಂತಲ್ಲ; 'ಇನಿಯಳ ಮುನಿಸು' ಇವರ ಕಳವಳಕ್ಕೆ ಕಾರಣವಾಗಿಲ್ಲವೆಂತಲ್ಲ; ಅಥವಾ 'ಮನದನ್ನೆ' ಯ ಮೋಹಪಾಶದಲ್ಲಿ ಸಿಲುಕಿ 'ಮಾನಾಪಮಾನವನು ತೊರೆದು ಬಂದೆನು ನಲ್ಲೆ'; 'ಏನಾದರೇನು ಎನಗೆ ನೀನೆ ಗತಿ' ಎಂದು ಅವಳ ಪ್ರೇಮಕ್ಕಾಗಿ ಕಾತರರಾಗಿಲ್ಲವೆಂತಲ್ಲ; ಇವರ ಹರಯದ ವಿಚಾರ,ಭಾವನೆಗಳ ಹುಚ್ಚು ಹೊಳೆಯ 'ಮಹಾಪೂರವು' ಹೊರಹೊಮ್ಮಿ ಹರಿದಿಲ್ಲವೆಂತಲ್ಲ. ಆದರೂ ಶ್ರೀಯುತರ ಇಂದಿನ ಕವನಗಳ ಓಘವು ಅನುಭಾವದ ಕಡೆಗೇ ಹೆಚ್ಚಾಗಿದೆ. 'ಒಂದು ಹಾಡು', 'ದೊರೆಯ ಕಾಣಲಳವೆ', 'ನನ್ನ ದಾರಿ', 'ಜೀವದುಸಿರೆ', 'ಆತ್ಮಶಿಶು', 'ಬೆಳಕ ಹೊಳೆ', 'ನಾನು', 'ಕೇಳಿಸದಾಯ್ತು ನನ್ನ ಗೀತ' ಎಂಬ ಕವನಗಳು ಇದಕ್ಕೆ ಉತ್ತಮ ದೃಷ್ಟಾಂತವಾಗಿವೆ.

ಅನುಭಾವ ಅಥವಾ ತತ್ವಜ್ಞಾನದ ಅರಿವು ಇಲ್ಲದವನು ನಿಜವಾದ ಕವಿಯೆ ಆಗಲಾರನಾದರೂ ಕವಿಗೂ ತತ್ವವಿದನಿಗೂ ( ಅನುಭವಿಗೂ ) ಒಂದು ವ್ಯತ್ಯಾಸವಿದೆ. ಕವಿಯು ಸೌಂದರ್ಯದಿಂದ ಸತ್ಯದ ಕಡೆಗೆ ಹೋಗುವನು. ತತ್ವವಿದನೂ ಅನುಭವಿಯೂ ಸತ್ಯದಿಂದ ಸೌಂದರ್ಯದ ಕಡೆಗೆ

ತೆರಳುವರು. ಸಾಮಾನ್ಯವಾಗಿ ಕವಿಯು ಲೋಕದ ಆಗುಹೋಗುಗಳನ್ನು ಬಿಡಿಬಿಡಿಯಾಗಿ ನೋಡುವನು. ತತ್ವವಿದನೂ ಅನುಭಾವಿಯೂ ಅದನ್ನೆ ಇಡಿಯಾಗಿ ನಿಡಿದಾಗಿ ನೋಡುವರು. ಕವಿಯು ಒಂದೊಂದು ಭಾವನೆಯಿಂದ ತಾನೆತಾನಾದಾಗ ಬರುವ ನುಡಿಗಳು ಇನ್ನೊಂದು ಬಗೆಯ ಭಾವನಿರ್ಭರದಲ್ಲಿದ್ದಾಗ ಹೊರಡುವ ನುಡಿಗಳಿಗೆ ಹಲವು ಬಾರಿ ಹೊಂದಿಕೆಯಾದುವು ಇರದೆ ಇರಲೂ ಬಹುದು.

ನೊಂದರು ಬೆಂದರು ಯಾರೇನೆಂದರು
ನೋಯಿಸದಿರು ಮನವ
ನುಂಗು ನುಂಗು ನುಂಗು; ಮನವೆ!
ನುಂಗು ನುಂಗು ನುಂಗು.

ಎಂದು ಉಪದೇಶಿಸುವ ಕವಿಯೆ ಹಾಡುವ ಇನ್ನೊಂದು ಗೀತವನ್ನು ಕೇಳಿ:

ಸುಳ್ಳು ಸತ್ಯ ಇಲ್ಲ ತಥ್ಯ
ಗೆಲುವು ಒಂದೇ ನಮ್ಮ ಗುರಿ
**ಒಳ್ಳೆತನವು ಮಳ್ಳತನವು**
ಬಲವು ಇದ್ದರಲ್ಲಿ ಸರಿ
ಬಾಳಿದೊಂದು ಸಮರದಂತೆ
ನುಗ್ಗು ನುಗ್ಗು ಮುಂದಕೆ........
ಬೀಳಬೇಡ ಹಿಂದಕೆ!

'ಬಲಂ ಉಪಾಸ್ವ' ಎಂಬ ಹಿರಿಯ ಮಂತ್ರ ಹೇಳುವ 'ಗೆಲುವು ಒಂದೇ ನಮ್ಮ ಗುರಿ' ಎಂದು ಸಾರುವ ಈ ಪದ್ಯದ ಭಾವಕ್ಕೂ 'ನೋಯಿಸದಿರು ಮನವ' ಎಂಬುದಕ್ಕೂ ಎಷ್ಟು ವ್ಯತ್ಯಾಸ! 'ಗೆಲುವು ಒಂದೇ ನಮ್ಮ ಗುರಿ'ಯ ತೂಕವೂ ತಪ್ಪದಂತೆ ಅದಕ್ಕೆ ಪೂರಕವಾಗಿ ಬರೆದ 'ಒಳಿತು' ಎಂಬ ಕವನವೂ ತುಂಬ ವಿಚಾರಾರ್ಹವಾಗಿದೆ. ಆದರೆ ಈ ವ್ಯತ್ಯಾಸಕ್ಕೆ ಕಾರಣವನ್ನು ಈ ಮೊದಲೆ ಹೇಳಿವೆ.

'ದಾನಿ' ಎಂಬ ಒಳ್ಳೆಯ ಪದ್ಯದಲ್ಲಿ ಮೊದಲಿನ ಎರಡು ನುಡಿಗಳು ಬಹಳ ಸೊಗಸಾಗಿ ಬಂದಿವೆ.'ನಾನು ಕೊಡುವವನೆಂದು ಹೆಮ್ಮೆ ಬೇಡ'; 'ಇಂದಿರುವುದೆಲ್ಲವೂ ಬಂದಿರುವುದೇತಕ್ಕೆ? ಎಂದಾದರೂ ಒಂದು ದಿನ

ಕೊಡುವುದಕ್ಕೆ' ಎಂದು ಈ ವಿಚಾರವನ್ನು ಮನವು ಒಪ್ಪುವ ರೀತಿಯಲ್ಲಿ ಸುಂದರವಾಗಿ ಹೇಳಿದ್ದಾಗಿದೆ. ಆದರೆ ಮೂರನೆಯ ಪದ್ಯದ ಮೊದಲಿಗೆ 'ಕೊಡಲು ಪಾತ್ರರು ಯಾರು, ಎಂಬ ಯೋಚನೆ ಬೇಡ; ಕೊಡಿಸುವಗೆ ಬಿಟ್ಟುಕೊಡು ಅದನು ನೀನು' ಎಂದು ಹೇಳಿರುವುದು ತೋರಿಕೆಯಲ್ಲಿ ಸ್ವಲ್ಪ ತೂಕವಿಲ್ಲದ ಮಾತೆಂದೆನಿಸುವಂತಿದೆ. ದೇಶ, ಕಾಲ, ಪಾತ್ರಗಳ ವಿಚಾರವಿಲ್ಲದೆ ಮಾಡುವ ದಾನ ತಾಮಸದಾನವೆಂದು ಭಗವದ್‌ಗೀತೆಯೆ ಹೇಳಿದೆ. ಇಲ್ಲಿ ಕವಿಯು ಅದನ್ನು ಸ್ಥೂಲವಾಗಿ 'ಕೊಡಿಸುವವಗೆ' (ಪರಮಾತ್ಮನಿಗೆ) ಬಿಟ್ಟುಕೊಡು ಎಂದು ಸೂಚಿಸಿದ್ದಾನೆ. ಆದರೆ ಕವಿಗಳ ಈ ಬಗೆಯ ನುಡಿಗಳು ಮನಸಿನ ಒಂದೊಂದು ವಿಶಿಷ್ಟ ಮಟ್ಟದಿಂದ ಬಂದುವುಗಳಾಗಿರುವುದರಿಂದ ಅವನ್ನೆಲ್ಲ ಸ್ಥೂಲವಾಗಿ ಒಂದೇ ಮಟ್ಟದಲ್ಲಿ ನಿಂತು ಅರ್ಥ ಮಾಡಲಾಗದು. ಹಾಗೆ ಮಾಡಿದಲ್ಲಿ ತೋರಿಕೆಯಲ್ಲಿ ಅವು ಪರಸ್ಪರ ಭಿನ್ನಾರ್ಥವುಳ್ಳುವು ಅಥವಾ ಅಸಂಬದ್ಧ ಎಂದು ಎನಿಸುವ ಸಂಭವವು ಇರುತ್ತದೆ.

ಶ್ರೀ ಶೇಷಗಿರಿರಾಯರ ಈ ಕವನಸಂಗ್ರಹವನ್ನು ನೋಡಿದರೆ, ಸ್ವಲ್ಪ ಕಾಲದಲ್ಲಿಯೆ ಇವರ ಶೈಲಿ ಹೇಗೆ ಹದಗೊಂಡು ಪರಿಪಕ್ವತೆಯನ್ನು ಹೊಂದುತ್ತಲಿರುವುದೆಂಬುದನ್ನು ಕಂಡು ಕೌತುಕವಾಗದೆ ಇರದು. ಮಾತಿನಲ್ಲಿ ಪ್ರಸಾದವಿದೆ. ಬಂಧದಲ್ಲಿ ಚೆಂದವಿದೆ. ಔಚಿತ್ಯವೂ ಅಲ್ಲಲ್ಲಿ ಇಲ್ಲದಿಲ್ಲ. ಇವೆಲ್ಲಕ್ಕಿಂತಲೂ ಒಂದು ಹೆಚ್ಚಿನ ಸಂಗತಿಯೊಂದುಂಟು; ಅದು ಕವಿಯ ಭಾಷೆ; ಕವಿಯ ಭಾಷೆ 'ಕನಸಿನ ಭಾಷೆ'. ಸುಪ್ತಮನಸು (sub-conscious mind) ಸುಷುಪ್ತಿಯಲ್ಲಿ ಎಚ್ಚತ್ತು ಕನಸಿನ ರೂಪದಿಂದ ಆಡುವ ಆ ಭಾಷೆ—ಕನಸಿನ ಭಾಷೆ; ಈ ಭಾಷೆಯ ಸಂಕೇತ, ಸಮಯಗಳ ಗುಟ್ಟನ್ನು ಬಿಡಿಸಿ ಹೇಳ ಹೋದರೆ ಅದು ನೀರಸವಾಗುವುದು. ಅದನ್ನು ಅನುಭವದಿಂದಲೆ ಅರಿಯಬೇಕು. ಕನಸುಗಳ ಆ ಭಾಷೆಗೇ 'ಪಶ್ಯಂತಿ' ವಾಣಿ ಎಂದು ಹೆಸರು. ಈ ಭಾಷೆಯನ್ನು ಇನ್ನೂ ಜೀವಂತವಾಗಿ ಉಳಿಸಿಕೊಂಡಿರುವ ಕವಿಯು ಭಾಗ್ಯವಂತನು. ಗ್ರಂಥಸ್ಥ ಕವಿಸಮಯ, ಸಂಕೇತಗಳನ್ನು ಪಾಠಮಾಡಿ, ಅಥವಾ ದಾಸರು ಶರಣರ ಮುಂಡಿಗೆ ಮುಂತಾದುವುಗಳ ಅನುಕರಣ ಮಾಡಿ ರಚಿಸಿರುವ ಕವನಗಳು

ನಿರ್ಜೀವವೆನಿಸುತ್ತವೆ. ಆದರೆ ಶ್ರೀ ಶೇಷಗಿರಿಯವರು ಈ ಭಾಷೆಯನ್ನು ಜೀವಂತವಾಗಿ ಉಳಿಸಿಕೊಳ್ಳಬಲ್ಲರೆಂಬುದು ಅವರ ಕೆಲವು ಕವನಗಳಿಂದ ಕಾಣಿಸುತ್ತದೆ. 'ವಸಂತನೆಂದಿಗೆ ಬರುವನು', 'ನನ್ನ ದೀಪ' ಇವು ಪೂರ್ವ ಸಂಕೇತಗಳೇ ಆಗಿದ್ದರೂ ಬಹಳ ಉಚಿತವಾಗಿವೆ.ರಮ್ಯವಾಗಿವೆ. ಆದರೆ ಇವಕ್ಕಿಂತಲೂ 'ಆತ್ಮಶಿಶು', 'ಬೆಳಕ ಹೊಳೆ' 'ಕೇಳಿಸದಾಯ್ತು ನನಗೀತ' ಇವುಗಳಲ್ಲಿ ಇವರ ವೈಶಿಷ್ಟ್ಯ ಮತ್ತು ಜೀವಂತತನವನ್ನು ಕಾಣಬಹುದಾಗಿದೆ. ಇತರ ಎಲ್ಲ ಕವನಗಳೂ ಅಷ್ಟೇ ಸೊಗಸಾಗಿವೆ ಯೆಂದು ಹೇಳುವ ಸಾಹಸವನ್ನು ಯಾರೂ ಮಾಡಲಾರರಾದರೂ ಇದ ರೊಳಗಿನ ಮೂರು ನಾಲ್ಕು ಪದ್ಯಗಳಿಗೆ ನಮ್ಮ ನಾಡಿನ ಯಾವುದೇ ಉತ್ತಮ ಕವಿತೆಗಳ ಸಂಗ್ರಹದಲ್ಲಿ ಎಡೆದೊರೆಯಬಹುದಾಗಿದೆ.'ಗೆಲುವು' ನಮ್ಮದೊಂದೆ ಗುರಿ', ಎಂಬುದು ತರುಣ ಜನಾಂಗಕ್ಕೆ ಅಚ್ಚುಮೆಚ್ಚಿನ ಕವನವಾಗಬಲ್ಲುದು.'ಒಳಿತು' ಎಂಬುದರ ಸೂಕ್ಷ್ಮವಾದ ಭಾವ, ಅದರ ವ್ಯಂಗ್ಯವು ತುಂಬ ಪರಿಣಾಮಕಾರಿಯಾಗಿವೆ. 'ಬೆಳಕು ಮತ್ತು ಕತ್ತಲೆ' ಚಿಕ್ಕದಾದರೂ ಚೊಕ್ಕಟವಾಗಿದೆ. ಆದರೆ 'ಮನಸು ಮತ್ತು ಮಾತು' ಎಂಬುದನ್ನೋದಿದ ಬಳಿಕ ಇದು ಮೊದಲಿನ ಪದ್ಯಗಳಿಗಿಂತಲೂ ವಿಚಾರದ ಸ್ಪಷ್ಟತೆ, ಹೇಳುವ ಕೌಶಲ್ಯ, ಶಬ್ದಜೋಡಣೆಯ ಔಚಿತ್ಯ ಮೊದಲಾದ ಗುಣಗಳಲ್ಲಿ ಒಂದು ಗುಂಜಿ ತೂಕ ಮಿಗಿಲಾದುದೆಂದೇ ಹೇಳ ಬೇಕೆನಿಸುತ್ತದೆ.

ಇದು, ಶ್ರೀ ಶೇಷಗಿರಿರಾಯರ ಮೊದಲನೆಯ ಕವನ ಸಂಗ್ರಹವು. ಆದರೂ ಇಷ್ಟು ಅಲ್ಪಾವಧಿಯಲ್ಲಿ ಇಂತಹ ಉತ್ತಮ ಕವಿತೆಗಳನ್ನು ಬರೆವ ಭಾಗ್ಯವು ಅವರಿಗೆ ದೊರೆತುದಕ್ಕಾಗಿ ನಾನು ಅವರನ್ನು ಅಭಿನಂದಿ ಸುತ್ತೇನೆ. ಮತ್ತು ಬೇಗನೆ, ಇನ್ನೂ ವಿವಿಧ ಭಾವಗಳ ದೊಡ್ಡ ಕವನ ಸಂಗ್ರಹವು ಹೊರಬರುವುದೆಂದು ಹಾರೈಸುತ್ತೇನೆ.

ಯುಗ ಪ್ರತೀಪದೆ **ಶಂ. ಬಾ. ಜೋಶಿ**

೧೫–೩–೪೫

# ಅರ್ಪಣೆ

ನನ್ನ ಗುರುಗಳೂ ಗೆಳೆಯರೂ

ಆದ

**ಶ್ರೀ ಅಂಬಿಕಾತನಯ ದತ್ತರಿಗೆ**

# ಪರಿವಿಡಿ


ಅರಿಕೆ

ಮುನ್ನುಡಿ

ಅರ್ಪಣ

೧ ಈಯೆ ಒಂದು ಹಾಡನು ೧

೨ ಸುಹೃದ—ಹೃದಯ ೨

೩ ಒಂದು ಹಾಡು ೩

೪ ದೊರೆಯ ಕಾಣಲಳವೆ ೫

೫ ಬನಸಿರಿ ೬

೬ ಮಳೆ ಬಂತು ೭

೭ ಕರುಣೆ ೯

೮ ನನ್ನ ದಾರಿ ೧೧

೯ ಜೀವದುಸಿರೆ ೧೩

೧೦ ವಸಂತನೊಂದಿಗೆ ಬರುವನು ೧೪

೧೧ ಸಂಕಲ್ಪ ೧೫

೧೨ ನನ್ನ ದೀಪ ೧೭

೧೩ ಆತ್ಮಶಿಶು ೧೮

೧೪ ಬೆಳಕಹೊಳೆ ೧೯

೧೫ ಸಾವು ೨೦

೧೬ ...ಗೆ ೨೧

೧೭ ಕೇಳಿಸದಾಯ್ತು ನನ ಗೀತ ೨೨

೧೮ ಇನಿಯಳ ಮುನಿಸು ೨೪

೧೯ ಮನದನ್ನೆ ೨೫

೨೦ ಪಯಣದ ಹಾಡು ೨೭

೨೧ ತಂಗಿ ಬಂದಳೆನ್ನ ಮನೆಗೆ ೨೯

೨೨ ದಾನಿ ೩೦

೨೩ ಕೌತುಕದ ಕನ್ಯೆ ೮೧

೨೪ ಅಗಲಿದ ಗೆಳೆಯನಿಗೆ ೩೨

೨೫ ಸುಖದ ವೃಕ್ಷ ೩೪

೨೬ ಗೆಲುವು ನಮ್ಮದೊಂದೆ ಗುರಿ ೩೫

೨೭ ಒಳಿತು ೩೮

೨೮ ಬೆಳಕು-ಕತ್ತಲೆ ೩೯

೨೯ ಮನಸು ಮತ್ತು ಮಾತು ೪೦

೩೦ ನೋಯಿಸದಿರು ಮನವ ೪೨

೩೧ ನನ್ನ ಕನ್ನಡ ೪೩


---

## ತಪ್ಪು—ಒಪ್ಪು

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೫ | ೧೦ | ಮತ್ತೇನ | ಮತ್ತ |
| ೯ | ೮ | ತುಂಬ | ತುಂಬು |
| ೧೦ | ೯ | ಮರೆವೆಯೂ | ಮರೆವೆಯಾ |
| | ೧೦ | ಅರಿಯದಿರುವೆಯೂ | ಅರಿಯದಿರುವೆಯಾ |
| ೧೭ | ೧೩ | ಒಟ್ಟೆ ಬಲಯು | ಬಟ್ಟೆಬಯಲು |
| ೨೪ | ೯ | ಮೊಡಕೆ | ಮೋಡಕೆ |
| ೨೮ | ೩ | ಹೊಂಬಸಿಲಲಿ | ಹೊಂಬಿಸಿಲಲಿ |

# ಈಯೆ ಒಂದು ಹಾಡನು.

ಓ ತಾಯಿ ಬರದೆ ಮಾಯಿ ಈಯೆ ಒಂದು ಹಾಡನು
ಕಾಯಿ ನಿನ್ನ ಕಂದನನ್ನು ಬಾಯ ಬಿಡುತ ಬಂದನು

ಮೊದಲ ನುಡಿಗಳಾದರೇನು ? ತೊದಲು ನುಡಿಗಳಿಲ್ಲವೇ ?
ಹೃದಯದಲರ ನನ್ನಿ ಮಾತು ಜಗಕೆ ರುಚಿಸಲಾರವೇ !

ಮೂಕನಾಗಿ ನೂಕಲಾರೆ ಸಾಕು ಬಾಳು ಬೇಸರ
ಲೋಕವೆಲ್ಲ ಕೈಯ ಬಿಟ್ಟಿರೆನಗೆ ನೀನೆ ಆಸರ

ಚಿತ್ತದಲ್ಲಿ ಬಿತ್ತು ಮುತ್ತಿನಂಥ ಮಾತನೊಂದನು
ಸುತ್ತು ಮುತ್ತು ಹತ್ತು ದಿಕ್ಕು ಹೇಳಲಿನ್ನ ಹಾಡನು

ಮನಸ, ನೆಟ್ಟ, ಕನಸಿನಂತೆ, ಹಾರ ಹರಿದ ಹೂಗಳಂತೆ
ಬನದ ಬಿಟ್ಟ, ಬಿಸ್ಸಿದಂತೆ, ಅಳಿಯುತಿರುವುದೊಂದೆ ಚಿಂತೆ
ರಮಿಸು ಜೋಗುಳವನು ಹಾಡಿ ನಿನ್ನ ಮಗಳು ಅಮುವೆ ಬಡವಿ
ಮಮತೆಯಿಂದ ಪ್ರೈಯದಡವಿ ನಿನ್ನ ಉಡಿಯೊಳದನು ಕೆಡಸಿ

ಬಗೆಯ ಬಯಲು ಬಂಜೆಯಾಗಿ ಭೋರಿಡುತ್ತ ಬಿದ್ದಿದೆ
ನಗುವ ಜಗದ ಮಸಣವಾಗಿ ಹೊಗೆಯು ಮುತ್ತಿಕೊಂಡಿದೆ
ಹಾರಿಸವನು, ಆರಿಸವನು, ಊರು ನಿನ್ನ ಬಾವುಟ
ಊರು ಕೇರಿಗೆಲ್ಲ ತೋರಿ ಸಾರುತಿರಲಿ ಹೊಸ ದಿಟ

---

# ಸುಹೃದ-ಹೃದಯ

ನೀನು ಮೆಚ್ಚಿ ಬರೆ, ನನ್ನ ಮನಸು ತೆರೆ, ನಂದನ ವನವಲ್ಲಿ
ಕಾನನವರಳಿ ಜೇನಿನ ಮಳೆಯು ಪ್ರೇಮಪಾಕದಲ್ಲಿ

ನಿನ್ನನುರಾಗದ ಬಿಸಿಲಿಗೆ ಎನ್ನಯ ಮಾನಸ ಹಿಮ ಕರಗೆ
ಸನ್ನುತ ಗಂಗಾಜಲ ಹರಿವುದು ನೀನಿರುತಿಹ ಎಡೆವರೆಗೆ

ಎನ್ನ ಕಲ್ಪನೆಯು ಕಾಮಧೇನುವಿನ ಕರುವೆ ನಿನ್ನ ಕರೆಗೆ
ಎನ್ನ ಎದೆಯ ಹಾಲುಕ್ಕಿ ಚಿಮ್ಮುವವು ನಿನ್ನ ಬಾಯವರೆಗೆ

ನಿನ್ನಡಿಗೆಜ್ಜೆಗೆ ಹೆಜ್ಜೆಯ ಹಾಕುತ ಎನ್ನ ಪರಮಹಂಸ
ತನ್ನನೆ ಮರೆದುನ್ಮತ್ತ ಭಾವದಲಿ ಮೆರೆವ ರಾಜಹಂಸ

ದೇಹವೆನ್ನಯ ಕಲ್ಪದ್ರುಮದಲಿ ಬಯಕೆ ಹಣ್ಣಿಗೇನು !
ಸ್ನೇಹಕರಗಳಿಂದೆತ್ತು ಅವುಗಳನು ಸುಹೃದ-ಹೃದಯ ನೀನು

---

# ಒಂದು ಹಾಡು

ಮಂದ ಮಾರುತ ತಂದ
ಚಂದದ ಹಾಡೊಂದ
ಅಂದೆನೆಂದರ ಬಾರದೀ ಬಾಯಿಗೆ
ಬೆಂದು ಬಳಲಿದ ಜನಕೆ
ನೊಂದು ನಂದಿದ ಮನಕೆ
ಬಂದೊಂದಮೃತದ ಮರು ಭೂಮಿಗೆ

ಕಿವಿಯಾರೆ ಕೇಳಿದೆ
ಕಿವಿಯಲ್ಲೆ ಉಳಿದಿದೆ
ನುಡಿದೆನೆಂದರೆ ಇಲ್ಲ ನಾಲಿಗೆಗೆ
ಮುದುಡಿದ್ದ ಮನವರಳಿ
ಕದಡಿದ್ದ ಬಗೆ ಮರಳಿ
ಹದಗೂಡಿ ಬೆರೆತವು ಆ ಹೊತ್ತಿಗೆ

ತುಂಬಿದೆ ತಲೆ ತುಂಬ
ದುಂಬಿಯ ಮೃದುಗಾನ
ವೆಂಬಂತೆ ದುಂದುಮ್ಮಿ ತಿರುಗುತಿದೆ
ರಂಬಿಸಿ ಮಗುವನು
ಚುಂಬಿಸಿ ಮಲಗಿಸ
ಲೆಂಬ ಜೋಗುಳ ತಾನ ಹೋಲುತಿದೆ

ಕನಸನಾಡಿನೊಳಿದ್ದು
ಇನಿಯಳನರಸುತ
ವನವನ ಅಲೆಯುವ ಗಂಧರ್ವನು
ದಣಿದು ಮಲಗಿರೆ ಕಂಡ
ಕನಸ ನಲ್ಲೆಯ ಸ್ವರವ
ನೆನಸಿ ಕೇಳಿದವೋಲು ಮನ ತಣಿಯಿತು

ತನು ವೀಣೆ ಮನ ತಂತಿ
ಯನುಮೀಂಟಿದಂತಾಯ್ತು
ಘನ ಝೇಂಕಾರವು ಜುಂಯ್ಗೂಡಿತು
ತನು ಮನ ಒಂದಾಗಿ
ನೆನೆವ ಭಕ್ತರ ಮೌನ
ವನು ತಂದ ಗಾನದ ಅರಿವಾಯಿತು

---

# ದೊರೆಯು ಕಾಣಲಳವೆ!

ಹಕ್ಕಿ ಹಾರತಾವ ಹಾರಿ ಆಡತಾವ ಚಿಕ್ಕ ಮಕ್ಕಳ್ಹಾಂಗ
ಅಕ್ಕ ನೋಡು ಭೋರಂಗಿ ಭೃಂಗಿ ಮದರಂಗಿ ಗಿಡದ ಮ್ಯಾಗ

ಮಾವು ಹೂತು ಮುಂಜಾವ ಮರಸತಾವ ನಸಕು ಬಣ್ಣ ಅದಕ
ಬೇವು ಜಾರಿ ಬರಿ ಗಂಧ ಬೀರತಾವ ಸುತ್ತು ಮುತ್ತು ಬನಕ

ಕಾಡ ಮಲ್ಲಿಗಿ ಜಾಡ ಹಿಡಿದು ಬೆಳೆದಾವ ಕೊಳ್ಳದಾಗ
ಜೋಡಿ ಜೋಡಿಲೆ ಹಾಡ ಹೇಳತಾವ ಹಕ್ಕಿ ಮ್ಯಾಳದಾಗ

ಬೆಳ್ಳಿ ನೀರು ಬೆಳದಿಂಗಳಂತೆ ಬಂದಿಳಿದು ಮುಗಿಲಿನಿಂದ
ಹಳ್ಳಕೊಳ್ಳ ಹೊರಸೂಸಿ ತಬ್ಬತಾವ ತೆವರ ಉಬ್ಬಿನಿಂದ

ಅತ್ತ ಕೇದಿಗೆ ಹತ್ತಿ ಹಾದಿ ಕೈಯತ್ತಿ ಕೋರತವ ಬರವ
ಎತ್ತ ಹೋದರೂ ಮತ್ತೇನ ನೋಡಿದರು ಚಂದ ಇಲ್ಲಿಯು ಇರವ

ಯಾರ ತೋಟವಿದು ? ಯಾರ ಆಟ ಮತ್ತಾರ ಮಾಟವಿದುವೆ
ತೋರಿ ಸುತ್ತ ಐಸಿರಿಯ ಮರೆಯಲಿಹ ದೊರೆಯು ಕಾಣಲಳವೆ

---

# ಬನಸಿರಿ

ಸಿಡಿಲಿನೊಡಲ ಒಡೆದು ಬಂತು ಬೆಳಕ ನೀರು ಭೂಮಿಗೆ
ಸುಡುವ ಕಾಡು ಹಡೆದಿತೊಡನೆ ಜೀವ ಬಂತು ನಾಡಿಗೆ

ಹಳ್ಳಕೊಳ್ಳ ಹರಿದು ಸೂಸಿ ಇಳೆಯ ಬೇಗೆ ಆರಿಸಿ
ಬಳ್ಳಿವರಿದು ಕೊರಳ ಹಾರ ಬೆಳಗುತಿತ್ತು ಶೋಭಿಸಿ

ಹಸಿರು ಹಚ್ಚೆ ಇಟ್ಟ ತೆರದಿ ಹರಡಿ ಹಬ್ಬಿ ಸುತ್ತಲು
ರಸವ ಸೂಸಿ ಎಸೆಯುತಿಹುದು ಕಾಡು ಮೇಡೊಳೆತ್ತಲು

ಬನದ ರಾಣಿ ಬನಶಂಕರಿ ಇನಿಯನರಸಿ ಪೋದಿಳೆ
ಹನಿಗೂಡಿದ ಅಲತ್ತಿಗೆಯಿಂದೊಪ್ಪಿದೆ ಈ ಚಿಗುರೆಲೆ

ಕಣ್ಣ ಬೀರಿದತ್ತ ಬಣ್ಣ ಬಿಸಿಲ ಹಣ್ಣ ತೂರುತ
ಸುಣ್ಣಗಾಗಿ ಹೊನ್ನ ತಳಿಯ ಕಂಡಕಡೆಗೆ ಹಾಕುತ

ನೆಲದಿ ನಡೆದು ಮರಕೆ ಜಿಗಿದು ಮುಗಿಲಿನಂಚಿನಾಚೆಗೆ
ಚೆಲುವ ಸುರಿಸಿ ಪೋದಳವಳು ಬೆರೆತು ವಿಶ್ವದೊಂದಿಗೆ

ಮನಸಿನಲ್ಲಿ ಮೂಡಿ ಬಂತು ಮಮತೆಯ ಮೃದು ಭಾವನೆ
ವನವ ತುಂಬಿ ತುಳುಕುತಿತ್ತು ಜೀವ ಜರಿದು ಸಾವನೆ

---

# ಮಳಿ ಬಂತು

ಮಳಿ ಬಂತು ನೋಡು ಮೂಡಲಿನ್ಯಾಗ—
ಮರಡೀಯ ತಲಿಯ ಮ್ಯಾಗ
ಗುಡು ಗುಡುಡು ಎಂದು ಗುಡಗ್ತದ ಕಾಡು ಕರಿಮುಗಿಲು—
ಕೇಳ್ದವರ ಎದೆಗೆ ಭುಗಿಲು
ಗಡಗಡಡ ಎಂದು ನಡಗ್ತದ ನಿಂತ ನೆಲದೊಡಲು—
ನೆರೆದವರಿಗೆಲ್ಲ ದಿಗಿಲು
ಇದನೋಡಿ ರವಿಯು ತಾನೋಡಿ ಹೋದನಪ ಚದರಿ—
ಬರಲಿಲ್ಲ ಚಿಕ್ಕಿಗಳು ಬೆದರಿ
ಮಳಿಬಂತು ನೋಡು ಮೂಡಲಿನ್ಯಾಗ—
ಮರಡೀಯ ತಲಿಯ ಮ್ಯಾಗ

ಬಾನಿಂದ ಬಿದ್ದು ಮೇಲೆದ್ದು ಮಣ್ಣಿನೊಡನಿದ್ದು—
ಹೊರಟೀತು ನೀರು ನೆಲದುದ್ದು
ಹನಿ ಹನಿ ಕೂಡಿ ಹಳ್ಳಾಗಿ ತುಂಬಿ ಹರಿದಾವ ಹೊಳೆಯುಕಡಿಗಾಗಿ—
ಅಲ್ಲಲ್ಲಿ ನಿಂತು ಮಡುವಾಗಿ
ಹೊಲ ತುಂಬಿ ತುಳುಕಿ ಕೆರೆನೀರ ಕುಲುಕಿ ನದಿನೀರನೆಲ್ಲ ಕಲಕಿ—
ಹಾಕೀತು ನೀರು ತಳಕಿ
ಗಿಡಮರ ಬಳ್ಳಿ ಎಲಿಸಾಲು ಕಳ್ಳಿ ನಿಂತಾವ ಜಳಕ ಮಾಡಿ—
ತಣಿದಾವು ನೀರ ನೋಡಿ
ಮಳಿ ಬಂತು ನೋಡು ಮೂಡಲಿನ್ಯಾಗ—
ಮರಡೀಯ ತಲಿಯ ಮ್ಯಾಗ

ದಿಕ್ಕೆಟ್ಟು ಹಾರಿ ಸಿಕ್ಕಲ್ಲಿ ಸೇರಿ ಹುದುಗ್ಯಾವ ಹಕ್ಕಿ ಪಕ್ಕಿ-
ಆಗ್ಯಾವ ಕಕ್ಕ ಬಿಕ್ಕಿ
ಗಿಡದಿಂದ ಗಿಡಕ ಹಾರಾಡಿ ನಡಕ ಬಿದ್ದಾವ ಕೋತಿ ಜೋತು-
ಮಳಿಗೂಡ ಹೆಣಗಿ ಸೋತು
ದನಕರುಗಳಿಲ್ಲ ನಿಂತಾವ ಹುಲ್ಲ ತಿನಲಾರ್ದ ಅಡವಿಯಲ್ಲಿ-
ಬೆಪ್ಪಾಗಿ ಅಲ್ಲಿ ಇಲ್ಲಿ
ದನಕಾವ ಹುಡುಗಹುಡುಗಿಯರು ಮನೆಗೆ ಬಂದಾರ ಓದಿತೊಯ್ದು-
ಬಿಟಗೊಟ್ಟ ಹುಲ್ಲ ಕೊಯ್ದು
ಮಳಿ ಬಂತು ನೋಡು — ಮೂಡಿಲಿನ್ಯಾಗ
ಮರಡೀಯ ತಲಿಯ ಮ್ಯಾಗ

ಬೇಸಿಗೆಯ ಬಿಸಿಲ ಬೇಗೆಯಲಿ ಬಳಲಿ ಬೆಂದಾಳ ಭೂಮಿತಾಯಿ-
ನೀರಡಿಸಿ ಬಿಟ್ಟು ಬಾಯಿ
ಗುಡ್ಡಕ್ಕೆ ತಾಗಿ ಪತ್ತಿದ್ದ ಬ್ಯಾಗಿ ಸುಟ್ಟಂಥ ಮೈಯ ಚಾಚಿ
ಹಲುಬ್ಯಾಳ ಅಂಗಲಾಚಿ
ಬಾಯಾರಿ ಬಾಯ್ಬಿರದೆ ಬಿದ್ದಲ್ಲೆ ಇದ್ದರು ಆಸರಕೆ ದೈವ ಬಂತು-
ಮರೆಯಲ್ಲಿ ಇತ್ತು ನಿಂತು
ಆಕಾಶ ತಂದೆ ಎದೆ ಕರಗಿ ಬಂದೆ ಮಳಿಯಾಗಿ ನೆಲಕೆ ನಿಂದೆ
ಬರುವಾಗ ಅಮೃತ ತಂದೆ
ಮಳಿ ಬಂತು ನೋಡು ಮೂಡಲಿನ್ಯಾಗ
ಮರಡೀಯ ತಲಿಯಮ್ಯಾಗ

---

# ಕರುಣೆ

೧

ದೇವ ನಿನ್ನಪಾರ ಕರುಣೆಗಾವ ನೆಲೆಯ ಕಾಣಲಿ !
ಈವ ಶಕ್ತಿ ಈಯುತಿರಲಿ ಭಕ್ತಿಭಾವ ಬೆಳೆಯಲಿ!
ಬೆಳಕು ಗಾಳಿ ನೀರು ನೆಲ ಇತ್ತುದೆಲ್ಲ ಸಾಲವೆ ?
ಬೆಳೆವ ಬದುಕಿಗಿದುವೆ ಭಾರವೆಂಪರೆಂತು ಹೇಪವೆ ?
ತಾಯಿ ಈದ ಮಗುವು ನೀನು ಬಂದೆ ಇತ್ತರಲ್ಲವೆ?
ಮಾಯ ಬಿಸುಟಿ ನಿನ್ನ ನೋಡು ಅದೇ ಶಕ್ತಿ ಅಂಶವೆ.
ಬೆಳೆವುದೊಂದೆ ಉಳಿದ ಕೆಲಸ ಇಲ್ಲವದಕೆ ಎಡೆ ತಡೆ;
ಇಳೆಯ ತುಂಬ ವಿಶ್ವ ವ್ಯಾಪಿ ನಿಲ್ಲಬೇಡ ನಡೆ ನಡೆ.

೨

ಜಗದ ಬೆಳಕಿಗುಗಮ ನಿನ್ನ ಹೊಳೆವ ಕಣ್ಣ ಕಾಂತಿಯು
ಗಂಧವೀವ ಗಂಧವತಿಯು ನಿನ್ನ ಮೈ ಸುಗಂಧವು
ಉಸುರಿನೆಳೆತ ಎದೆಯ ಕುಣಿತ ಕಡಲಿನೇರು ಇಳಿತವು,
ಇದಕೆ ತಾಳ ಹಾಕುತಿಹವು ಚಿಕ್ಕೆ ಬೆರಗುಗೊಂಡವು.
ನೀನು ಸಾಗೆ ಅಮರನಾಗಿ ಹತ್ತು ದಿಕ್ಕು ತುಂಬುತ
ಗಾನ ಬಂತು ಗಗನದಿಂದ ನಿನ್ನ ಬೆನ್ನ ಹತ್ತುತ,
ತುಂಬಿ ತುಳುಕಿತಿಳೆಯ ಕಲಶ ಕಾದಿಹ ಕದಲಾರತಿ
ಪ್ರಕೃತಿ ಪುರುಷಗೆತ್ತಿ ಹಿಡಿದ ಹೊನ್ನ ಮಂಗಲಾರತಿ

೩

ದೇಹವಿದ್ದರೇನು ಜೀವ ನಿನ್ನನೆ ನೀ ಮರೆವೆಯೂ ?
ನೀನು ಹೊತ್ತ ಪರಿಗಳನ್ನೆ ನೀನೆ ಅರಿಯದಿರುವೆಯೂ ?
ಹುಟ್ಟಿನಲ್ಲಿ ಹುದುಗಿ ಸಾವು ದೇಹರೂಪ ತಾಳಿತು
ಸೃಷ್ಟಿಯಲ್ಲಿ ತಾನು ತೋರಿ ನಿನ್ನನು ಮರೆ ಮಾಡಿತು
ನಿನ್ನ ಜರೆದು ತಾನು ಮೆರೆದು ಇದಕೆ ಬಾಳು ಎಂದಿತು
ದಣಿದು ಕೊನೆಗೆ ಮಣ್ಣುಗೂಡೆ ದೇಹವಳಿದು ಹೋಯಿತು
ತನ್ನ ಅರಿವು ತನಗೆ ಬರದೆ ಇದ್ದು ಇಲ್ಲದಾಯಿತು
ಅಳಿದ ದೇಹದಿಂದ ಉಳಿದ ನಿನಗೆ ವಿಜಯವಾಯಿತು

---

## ನನ್ನ ದಾರಿ

ನನ್ನ ದಾರಿ ನನಗೆ ಇಹುದು
ನಿನ್ನ ನೆರವು ಸತತ ಬಹುದು

ನೀನು ಶಿಲ್ಪಿ ನಾನು ಶಿಲೆಯು
ನೀನೆ ಕಡಿದು ಮೂಡಿಸಿರಲು
ನಿನ್ನ ಕಲೆಗೆ ಕುಂದು ಬರದು
ನಿನ್ನ ಸೃಷ್ಟಿ ಸಾವು ಇರದು

ಆದಿಶಕ್ತಿಯೊಬ್ಬ ನೀನು
ನಿನ್ನದೊಂದೆ ಕೃತಿಯು ನಾನು
ಅಳಿವು ಇರದು ನಿನ್ನ ಕೃತಿಗೆ
ಉಳಿವೆ ನಾನು ಕೊನೆಯ ವರೆಗೆ

ತಮ್ಮತನವು ತಮಗೆ ಮಾನ್ಯ
ತಮ್ಮ ರೂಪು ಚಿರ ನವೀನ
ತಮ್ಮ ಚೆಲುವು ತಮ್ಮ ಸಲಿವು
ಹೆಮ್ಮೆ ತರುವುದದರ ಅರಿವು

ವಿಶ್ವ ಕವಿಯ ಪ್ರತಿಭೆ ನಾನು
ನಶ್ವರನೆಂದಂದರಾರು ?
ಶಾಶ್ವತದಿಂದಿರುವೆ ನಾನು
ಆಶ್ವಾಸದ ಅಭಯ ನೀಡು

ಮಮಕಾರದ ಮಾತಿದಲ್ಲ
ಮಮಕಾರವ ಬಿಟ್ಟರಿಲ್ಲ
ಮಮಭಾವವೆ ಸಮಭಾವವು
ಮಮದರಿವೇ ಹಿರಿಗುರಿಯು

---

# ಜೀವದುಸಿರೆ !

ಜೀವದುಸಿರೆ ಹೆಸರ ಹೇಳು ಏಕೆ ಬೇಸರ!
ಭಾವದಲರೆ ಬದುಕು ನಿನಗೆ ದೇವನಾಸರ!

ಯುಗಯುಗಗಳು ನಿನ್ನಡಿಯಲಿ ನಗುತ ಮಲಗಿವೆ
ಮುಗಿಯಿಲ್ಲದ ಮುಗಿಲದಾರಿ ಮುಂದೆ ಹಾಸಿವೆ

ಮಾತೆ ನೀನು ಮಾತು ಕಲಿಸಿ ಮನದೊಳಡಗಿಹೆ
ಗೀತೆ ನೀನು ಗಾನ ನುಡಿಸಿ ಕಿವಿಯೊಳಿಡಿಗಿಹೆ

ಕವಿದ ಕತ್ತಲನ್ನು ದೂಡಿ ರವಿಯೆ ಉದಿಸಿದೆ
ಭವದ ಬಾಗಿಲನ್ನು ತೆರೆದು ಬಾಳ ಬೆಳಗಿದೆ

ವಸುಧೆಯಲ್ಲಿ ಅವತರಿಸಿಹ ವಾಸುದೇವನೆ
ಬಸಿರಿನಲ್ಲಿ ಒಡಮೂಡಿದ ಅಂತರಾತ್ಮನೆ

---

## ವಸಂತನೆಂದಿಗೆ ಬರುವನು

ಮರದ ಮೇಲಲಿ ಅಡವಿಯೊಡಲಲಿ
ನಗುತ ಬಂದ ವಸಂತನು
ಸತ್ತ ಸೃಷ್ಟಿಯ ಗರ್ಭದಿಂದಲೆ
ಹೊಸತು ಜೀವನ ತಂದನು

ಬಾಳು ಇದ್ದರು ಬೆಳಗೆ ಇಲ್ಲದ
ಎನ್ನನೇಕವ ಮರೆತನು?
ಎನ್ನ ಬಾಳಿಗೆ ಬೆಳಗೆ ಈವ
ವಸಂತನೆಂದಿಗೆ ಬರುವನು?

---

## ಸಂಕಲ್ಪ

ಬಯಸಿ ಬೇಡಿದ ಹಣ್ಣು
ಬಾಯಿಯಲಿ ಬಿದ್ದಿರಲು
.ನುಂಗು ನುಂಗದನು ನೀನುಗುಳಬೇಡ

ಸಿಹಿ ಇರಲಿ ಕಹಿ ಇರಲಿ
ಹೇಗಾದರೂ ಇರಲಿ
ನುಂಗು ನುಂಗದನು ನೀ ಹೆದರಬೇಡ

ಸಿಹಿ ಅದುವೆ ರುಚಿಕರವು
ಕಹಿ ಅದುವೆ ಹಿತಕರವು
ಯಾವುದೇನಿದ್ದರೂ ಪಥ್ಯಕರವು
ನಮ್ಮ ಪಾಲಿಗೆ ಬಂದು
ದೆಲ್ಲ ಪಂಚಾಮೃತವು
ಒಲ್ಲೆನೆನಬೇಡ ಸ್ವೀಕರಿಸು ಹಿತವು

ಮೌನವಾಗಿರು ಮನವೆ
ಏನಾದರೂ ಒಳಿತು
ಹಾನಿಯೆಂಬುದು ಜಗಕೆ ಗೊತ್ತೆ ಇಲ್ಲ
ಏನಿರುವುದೆಲ್ಲವೂ
ಜೀವನದ ರಕ್ಷಣೆಗೆ
ದೀನ ರಕ್ಷಕನರಿತೆ ಹುಟ್ಟಿಸಿಹನು

ಮನವೆ, ಮಾನಸ ಸರವೆ
ಬಂದ ಬೆಂಕಿಯನೆಲ್ಲ
ನುಂಗು ನೊಂದಿಸು ಮತ್ತೆ ಕುದಿಯಬೇಡ
ಶಾಂತವಾಗಿರು ಸತತ
ಚಿಂತಿಸುವವೇತಕೇ
ಕಾಂತದಲಿ ನಿನ್ನ ಗುಣವರಿತು ಸುಖಿಸು

---

# ನನ್ನ ದೀಪ

ಬಟ್ಟ ಬಯಲ ನೆಲದಲಿ
ಇಟ್ಟೆ ನನ್ನ ದೀಪವ

ಗಾಳಿ ಬೀಸಿ ಬೀಸಿತು
ಮೇಲೆ ಮೋಡ ಕವಿದಿತು
ಮಳೆಯು ಕೂಡ ಸುರಿಯಿತು
ಮೇರೆದಪ್ಪಿ ಹರಿಯಿತು
ಆದರೆನ್ನ ದೀಪವು
ಆರಲಿಲ್ಲ ಉಳಿಯಿತು.

ಆದರೇನು? ನೀವು ನೊಂದು
ಬಿಟ್ಟ ಬಿಸಿಯ ಉಸಿರನು
ತಾಳಿಕೊಳುವ ತ್ರಾಣವದಕೆ
ಬಾರದೆಂದು ಅನಿಸಿತು.
ಒಟ್ಟ ಬಲಯ ನೆಲದಲಿ
ಇಟ್ಟೆ ನನ್ನ ದೀಪವ.

# ಆತ್ಮಶಿಶು

ಅತಳಲೋಕದ ತಳವನೆಲ್ಲನೊಂದಡಿ ಮಾಡಿ
ಮುಗಿ ಇಲ್ಲದಿಹ ಮುಗಿಲ ಮೇಲೆ ಮುಖವನ್ನೆತ್ತಿ
ನೋಡಿ ನಲಿದೆನು ಒಂದು ಅದ್ಭುತದ ಲೀಲೆಯನು.
ಶಿಶುರೂಪದಿಂದೆನ್ನ ಆತ್ಮ ತಾನಾಡುತಿಹನಲ್ಲಿ.
ಚಿಕ್ಕೆ ಚಂಡನು ಮಾಡಿ ದೂರ ಎಸೆದಾಡುವನು;
ನಕ್ಷತ್ರಮಸ್ತಕದ ಮೇಲೆ ಕಾಲನ್ನೊತ್ತಿ
ಜಿಗಿದು ಹಾರಾಡುವನು. ಕಂಡು ಕಣ್ಮರೆಯಾಗಿ
ಓಡಿ ಹೋಗುವ ಉಲ್ಕಗಳ ಮೇಲೆ ಉಲುಕುವನು
ಹುಲಿಯಂತೆ ಬೇಟೆಗಾರನು ಆಗಿ, ದಣಿ ದಣಿದು
ಹಿಂದಿರುಗಿ ನನ್ನ ನಗೆಮೊಗ ನೋಡಿ, ಜಿಗಿದೋಡಿ
ಬಂದಪ್ಪಿಕೊಂಡನು ತಾಯಿಯಂತೆನ್ನ ಮುದದಿ.
ತನುವ ಜೋಳಿಗೆ ಮಾಡಿ ಮಲಗಿಸಿದೆನವನನ್ನು
ಜೋಗುಳ ಪಾಡಿ ಹರಿಸಿದೆನು ಹಿಗ್ಗಿನಿಂದವನ.
ಏನು ನೋಟವಿದೆಂಥ ಲೀಲೆಯು ಆತ್ಮ ಶಿಶುವಿನದು!

---

# ಬೆಳಕಹೊಳೆ

ಬೆಳಕಹೊಳೆಯಲೀಸುತಿದ್ದೆ
ತೀರದೂರಪಾರದಲ್ಲಿ
ಮೇರೆ ಮೀರಿ ಹರಿವ ಹೊಳೆಯು
ನೀರಿನೊಳಗೆ ಧುಮುಕಿಕೊಂಡು

ಮುಳುಗಿ ಒಳಗೆ, ಹಾರಿ ಮೇಲೆ
ಸಾರಿ ತೆರೆಯನೇರಿ ನಿಂತೆ
ಮುಗಿಲಿನಗಲವಾಗಿ ಜೆಳೆದು
ಇಳೆಯನೊಮ್ಮೆ ಅಪ್ಪಿಕೊಂಡೆ

ಹಾಲನೊರೆಯು ಸುರುಳಿಯಾಗಿ
ಬಿಳಿಯ ಆನೆ ಓಳಿಗೊಂಡು
ಕೇಳಿಗಾಗಿ ಧುಮುಕಿ ಎನ್ನ
ಏಳು ಸೊಂಡಿಲಿಂದ ಎತ್ತಿ
ಚಂದ್ರಲೋಕಕೊಯ್ದಿತು
ಇಂದ್ರಪಟ್ಟಗಟ್ಟಿತು

---

# ನಾನು

ನನ್ನ ಜೀವವರ್ತುಲಕೊಂದೆ ನಾನೆ ಅಮೃತ ಬಿಂದು
ನನ್ನ ನಭೋಮಂಡಲಕೆ ನಾನೆ ಭಾನು ಇಂದು

ನನ್ನ ಮನದ ಸರಸಿನೊಳಿಲ್ಲ ನಾನೆ ಮೀನ ಮೀಯು
ನನ್ನ ಬಸಿರ ಬಯಲಿನಲಿ ನಾನೆ ಪ್ರಾಣವಾಯು

ಹಕ್ಕಿಯಾಗಿ ಹಾರುತಲಿರುವೆ ನನ್ನ ತೋಟದಲ್ಲಿ
ಸೊಕ್ಕಿದ ಗಜ ಧುಮುಕುವೆ ನಾ ನನ್ನರಣ್ಯದಲ್ಲಿ

ಕಲ್ಪನಲತೆ ಕುಸುಮ ನಾನು ಅರಳಿ ಮರಳಿ ಅರಳುವೆ
ಶಿಲ್ಪಿ ನಾನು ನನ್ನ ಕಲೆಯ ಮೈಯ ಮೂರ್ತಿ ನಿಲಿಸುವೆ

ತರಂಗ ತಾನ ಗಾನವು ನಾ ನನ್ನ ಗೀತಗಾನಕೆ
ತುರಂಗ ಭಂಗಿ ಗತಿಯು ನಾ ನನ್ನ ದೇಹ ಯಂತ್ರಕೆ

ಮನಸಿನುಯ್ಯಾಲೆಯಾಗಿ ತೂಗುತಿಹೆನು ನಾ
ಮನದ ಮನಸಿನೊಳಗೆ ಮಿನುಗಿ ಬೆಳಗುತಿಹೆನು ನಾ

ಬೆಳಕಿನಿಂದ ಬಾಳ ಬೆಳೆಯ ಬೆಳೆಸುತಿಹೆನು ನಾ
ತಿಳಿವಿನ ಫಲವಾಗಿ ಬಾಳಿ ಫಲಿಸುತಿಹೆನು ನಾ

---

## ....ಗೆ

ಎನ್ನ ಮನವದು ಅಹುದು ರನ್ನಗನ್ನಡಿ ಗೆಳತಿ
ಬಂದೊಮ್ಮೆ ನೋಡು ನಿನ್ನಯ ರೂಪವನ್ನಿಲ್ಲಿ
ಏನಿಹುದು ? ಏನಿಲ್ಲವೆಂದು ದೂರದಿ ನಿಂದು
ಹಿಂದಿರುಗಿ ಹೋಗದಿರು ಸಾಶಂಕಳಾಗಿ ನೀ.
ಹಿಂದೊಮ್ಮೆ ಕೇಳಿದೆನು ಕೆಳೆತನದ ಗುರುಮಂತ್ರ
ಅಂದಿನಿಂದದನು ಜಪಿಸುವೆನು ಒಮ್ಮನದಿಂದ
ನಿನ್ನ ಶ್ರೇಯವೆ ಶ್ರೇಯ, ನಿನ್ನ ಗೆಲವೇ ಗೆಲವು,
ಎನ್ನದೆಲ್ಲವು ನಿನಗೆ ಅರ್ಪಿತವು. ಇದು ನಿಜವು.

---

## ಕೇಳಿಸದಾಯ್ತು ನನ ಗೀತ

ಕೇಳಿಸದಾಯ್ತು ನನ ಗೀತ
ಮೇಳದಿಂದೊಳಗೊಂಡ ಸುರರ ಸಂಗೀತ

ನನ್ನದೀಮನ ತಣಿಸಲೆಂದು
ನಿನ್ನ ಕರುಳಿನ ಆಳದಿಂದ ಹೊರಬಂದು
ಎನ್ನ ಜೀವಕೆ ಶಾಂತಿ ತಂದು
ತನ್ನ ತಾನದಿ ತಾನಗುಡುವ ಸಂಗೀತ

ಮನ ತುಂಬಿ ನಿನ್ನ ಹೊರಸೂಸಿ
ಮನೆ ತುಂಬಿ ನೆರೆತುಂಬಿ ತುಳುಕೀದ ರಾಸಿ
ದನಿಗೊಡುತ ದಿಕ್ಕೆಲ್ಲ ಹಾಸಿ
ನಿನದಿಸುವ ನಾದಮಯ ನಿನ್ನ ಸಂಗೀತ

ನೆನಪೀನ ಬಿರುಗಾಳಿ ಬೀಸಿ
ಮನದ ಕಾಸಾರದಿ ಅಲೆಗಳು ಸೂಸಿ
ತನುತೀರದಲ್ಲಿ ಅಪ್ಪಳಿಸಿ
ಕನಲೀಸಿ ಕೆಣಕುವವು ಎನ್ನ ಮೂದಲಿಸಿ

ಸುತ್ತೆಲ್ಲ ಮೌನವು ಮುತ್ತಿ
ಹತ್ತೊತ್ತಿ ಎನ್ನನು ತಾನು ಕತ್ತೆತ್ತಿ
ಕತ್ತಲ ಕೈದಿಯನೆತ್ತಿ
ಮುತ್ತಿಕ್ಕಿ ಕುಣಿವುದು ಎನ್ನನು ಸುತ್ತಿ

ಭಣಗುಡುತಲಿಹುದು ಆಕಾಶ
ರಣಗುಟ್ಟಿ ಹೊಡೆವುದು ರೌದ್ರ ಪ್ರಕಾಶ
ಕೆಣಕೀದ ಹುಲಿಯ ಆವೇಶ
ಅಣಕಿಸುತ ಅಲೆಯುವದು ತೂರಿ ಯಮಪಾಶ

ಪೂರ್ಣಿಮೆಯ ಪೂರ್ಣ ಚಂದ್ರಮನು
ವರ್ಣವಿಹೀನ ವದನನಾಗಿಹನು
ಕರ್ಣವ ನೀಡಿ ಕೇಳಿದನು
ವರ್ಣನೆಗೆ ಸಿಲುಕದ ಗಾನ ಸುಧೆಯನ್ನು

ಕಂದನ ಮಲಗಿಸಲೆಂದು
ಅಂದ ಜೋಗುಳವಿಂದು ನನ ಮುಂದೆ ನಿಂದು
ನೊಂದಿರುವ ಮನ ರಮಿಸಲೆಂದು
ಬಂದಪ್ಪಿಕೊಂಡಿತು ಅಮೃತದ ಬಿಂದು

---

## ಇನಿಯಳ ಮುನಿಸು

ಇನಿಯಳ ಮುನಿಸಿನ ಅರ್ಥವ ಜಗದಲಿ ಹೇಳುವರಾರುಂಟು?
ಕನಲಿದರೇನು ? ಇನಿಯಳ ಹೃದಯದಿ ಪ್ರೀತಿಯ ಸೆಲೆಯುಂಟು

ಸಿಡಿಲಿನ ಗುಡುಗಿಗೆ ನಡುಗದ ಕ್ಷೇತ್ರವು ದೊರಕುವುದಿನ್ನೆಲ್ಲಿ?
ಸಿಡಿಲಿನ ಒಡಲೊಳಗಿಂದಲೆ ಹರಿವುದು ತಣಿಸುವ ಜಲವಲ್ಲಿ

ಮನಸಿನ ಆಳವನಳೆದವರುಂಟೆ ಎಲ್ಲರು ಮುಳುಗಿಹರು
ಕನಸಿನ ಕೈಲಾಸಕೆ ಹೊರಟವರು ಮತ್ತೆ ಮರಳಿ ಬಹರು

ತೆರೆತೆರೆದಂತೆಯೆ ತೆರೆಯುವ ಮನಸಿಗೆ ತೆರೆಗಳು ಬಹಳುಂಟು
ತೆರೆಯುವ ಹದವೂ, ಅರಿಯುವ ಹವಣೂ ತಾಳ್ಮೆಯು ಇಡುಗಂಟು

ಇನಿಯಳ ಮುನಿಸಿನ ಮೊಡಕೆ ನಲ್ಲನ ನಲ್ಮೆ ಕಿರಣ ಸೋಂಕೆ
ಹನಿಸುವ ಮಾನಸ ಸರವಿಹುದಲ್ಲೆ, ಇಲ್ಲ ಎನಗೆ ಶಂಕೆ!

ಪ್ರೀತಿ ಮುನಿಸುಗಳಿಗಂತರ ಉಂಟೇ, ಒಂದರ ಬೆನ್ನೊಂದು!
ರೀತಿಯು ಬಿಟ್ಟರು ನೀತಿಯು ಬಿಡದು, ಇರುವವೆರಡು ಒಂದು!

---

# ಮನದನ್ನೆ

ಮಾನಾಪಮಾನವನು ತೊರೆದು ಬಂದೆನು ನಲ್ಲೆ
ಏನಾದರೇನೆನಗೆ ನೀನೆ ಗತಿ ನಾ ಬಲ್ಲೆ

ನೀನೊಲಿದು ಮುದ ಬೀರೆ, ನಿನ್ನ ನಗೆ ಮೊಗದೋರೆ,
ನಾನಹುದು ನಿನ್ನ ಬಗೆ ಮುಗಿಲೊಳಿಹ ಧ್ರುವತಾರೆ.

ಎನ್ನಂತರಂಗದಲಿ ನೀನೆ ನರ್ತಿಸುತಿರುವೆ
ನಿನ್ನ ಪ್ರತಿಬಿಂಬ ನಾನಂತೆ ವರ್ತಿಸುತಿರುವೆ

ನನಗೆಲ್ಲಿ ಅಸ್ತಿತ್ತ್ವ ! ನಿನ್ನೊಳಿಹ ಒಳಸತ್ತ್ವ
ಮಿನುಗಿಲ್ಲಿ ಮೈಗೊಂಡು ನಿಂತಿರುವ ಮಹತತ್ತ್ವ

ನೀನು ರೂಪಿಸಿದಂತೆ ನಾನು ವ್ಯಾಪಿಸುತಿಹೆನು
ಭಾನು ಬೀರುವ ಬೆಳಕ ನಾ ಹೋಲುತಿಹೆನು

ನೀನೆನ್ನ ಸಂಜೀವಿ ನಾ ಬರಿಯ ಮೃತ ಜೀವಿ
ನಿನ್ನೆದೆಯ ಕನಸಿನಲಿ ಅಲೆಯುತಿಹ ಅನುಭಾವಿ

ನಿನ್ನ ಕಲ್ಪನೆ ಕುಮರಿ ಕೆತ್ತಿರುವ ಮೂರ್ತಿ ನಾ
ನಿನ್ನ ಜೀವನದೊಡನೆ ಸಾಗಿ ಬಹ ಕೀರ್ತಿ ನಾ

ನೀನಿಲ್ಲದಿರೆ ನಾನು ಕುರುಡು ಕಣ್ಣಿನ ಭಾನು
ನೀನೆಲ್ಲಿ ನಾನಲ್ಲಿ ತುಂಬಿ ತುಳುಕುವ ಜೇನು

ಕುರುಡು ಪ್ರೇಮಕೆ ಎನ್ನ ನೀನೆ ಎರಡೂ ಕಣ್ಣು
ಬರಡು ಜೀವನಲತೆಗೆ ಫಲಿಸಿ ಬಹ ಹಣ್ಣು

ಹೆಣ್ಣಲ್ಲ ನೀನು ಬರಿ ಎನ್ನ ಪ್ರೀತಿಯ ದೂತಿ
ಪುಣ್ಯವೆನ್ನಯದೀಗ ಫಲಿಸಿರುವ ಹೊಸ ರೀತಿ

* * *

ಯಾವ ಮಾತಿನಿಂದ ನಿನ್ನ ಭಾವ ತಿಳಿಯಲಿ !
ಯಾವ ಕೃತಿಯನೆಸಗಿ ನಿನ್ನ ಹೇವ ಬೆಳೆಸಲಿ !

ಎಂತು ಎನ್ನ ಅಂತರಂಗವನ್ನು ತಿಳಿಸಲಿ !
ಚಿಂತೆಯೊಂದೆ ಹೇಗೆ ನಿನ್ನ ಪ್ರೀತಿ ಗಳಿಸಲಿ !

* * *

ದೇವ ತೋರು ಕರುಣೆ ಬೀರು ದಿಕ್ಕುಗಾಣದಾಗಿಹೆ
ನೋವನಿತ್ತು ಕಾವ ಬಗೆಯನಿಂತು ಅರಿಯದಾಗಿಹೆ

ಪ್ರೇಮವನ್ನೆ ಬಸಿರೊಳಿರಿಸಿ ಪ್ರೇಮವನ್ನೆ ಉಸಿರುವಂತೆ
ಪ್ರೇಮಪುತ್ಥಳಿಯ ಮಾಡು ಪ್ರೇಮ ಜೀವ ಉದಿಸಿದಂತೆ

* * *

ನಿನ್ನ ಮನಸೆ ನನ್ನ ಮನಸು ನಿನಗೆ ವಿಜಯವಾಗಲೀ
ಎನ್ನಹಂಕಾರವಳಿದು ನಿನ್ನ ತನವ ಪಡೆಯಲಿ.

---

## ಪಯಣದ ಹಾಡು

ಗಾಳಿ ಬಿಟ್ಟಿತು ಏಳು ಕೆಳದಿ ಕೇಳು ಕಡಲಿನ ಕರೆಯನು
ನಾಳೆ ಸಿಕ್ಕದು ಇಂಥ ವೇಳೆಯು ಹೇಳು ಪಯಣದ ಹಾಡನು

ದೇವಲೋಕದ ದಿವ್ಯ ಗಾನದ ಭವ್ಯನಾದವನಾಲಿಸು
ಸಾವು ನೋವುಗಳಾಚೆ ಚಾಚಿಹ ಭಾವಲೋಕವನೀಕ್ಷಿಸು

ಸತ್ಯನಿತ್ಯಗಳಿಂದ ಬಂದಿಹ ಚೈತ್ಯಪುರುಷನವಾತ್ಯರು
ಮೃತ್ಯುಮುಖದಿಂದಮರರಾದೆವು ನಮ್ಮ ಹಿರಿಯರು ಕರೆವರು

ತೊರೆದು ತೀರದಿ ತೊಡವುಗಳನೀನೇರು ಹಡಗವು ಕಾದಿದೆ
ತೊರೆಯು ತೊಡೆಯನ್ನೇರಿ ಆಚೆಯ ದಡದ ವರೆಗೂ ಸಾಗಿದೆ

ಹೊಂಬಣ್ಣದ ಹೊನ್ನು ಹಡಗವು ಹೊಂಬಸಿಲಲಿ ಹೊಳೆವುದು
ನಂಬಿದವರಿಗೆ ಇಂಬು ದೊರೆಯುವದೆಂಬ ಸತ್ಯವ ಸಾರ್ವುದು

ನೀಲಿ ಪಟ ಮೇಲೆದ್ದು ಮೆರೆವುದು ನೀಲವ್ಯೋಮದ ಮಧ್ಯದಿ
ಕಾಲದೊಂದಿಗೆ ತಾಲ ಹಾಕುತಕಾಲ ಮಂಡಲ ಗರ್ಭದಿ

ದಾರಿಯುದ್ದಕು ಕೆತ್ತಿ ಕೋದಿದೆ ಹವಳ ಮುತ್ತಿನ ತೋರಣ
ಹಾರವಂದದಿ ಹಾರ ಹಕ್ಕಿಗಳಿಂದ ಬೆಳಗಿದೆ ಮೂಡಣ

ಮುಗಿಲ ನೀರಿನ ಮೀನದಂದದಿ ರೆಕ್ಕೆಗೊಂಡಿಹ ಮನುಜರು
ನಗುತ ನಮ್ಮನ್ನೆದುರುಗೊಳ್ಳುತ ಮುಂದ ಮುಂದಕೆ ಹೊರಟರು

ಅಲೆಯುತಲೆಯುತ ಅಲೆಗಳೊಂದಿಗೆ ಆಟವಾಡುತ ಸಾಗುವಾ
ಕಲೆತು ಕಡಲಿನ ಜೀವದೊಂದಿಗೆ ದೇವಲೋಕಕ್ಕೇರುವಾ

ನೋಡು ದೂರದಿ ಆಚೆ ತೀರದಿ ದೇವಗಡಣವು ಕೂಡಿದೆ
ಮೋಡದೊಡಲಿಂದಿಳಿದು ಬಂದಿಹ ತಾರೆ ಹೂಮಳೆಗರೆದಿದೆ

ಜೀವ ಹಿರಿ ಹಿರಿದಾಗಲಿ
ದೇವನೊಲುಮೆಗೆ ಬಾಗಲಿ

ಆತನುಸುರಿಗೆ ಹೆಸರು ಬರಲೆಂದೆನ್ನು ಸಾಗುವಾ ಮುಂದಕೆ
ಆತನಿಂದಲೆ ಬಂದು ಮರಳಿದೆವೆನ್ನು ಆತನ ಪಾದಕೆ

---

# ತಂಗಿ ಬಂದಳೆನ್ನ ಮನೆಗೆ

ತಂಗಿ ಬಂದಳೆನ್ನ ಮನೆಗೆ
ಮಂಗಳವನು ತಂದಳು

ಅಕ್ಕ ನಕ್ಕು ನಡೆದ ದಾರಿ
ತಕ್ಕದೆಂದು ತನಗೆ ತೋರಿ
ಅಕ್ಕರತೆಯ ನಗೆಯ ಬೀರಿ
ಚಕ್ಕಂದದಿ ನೆಗೆದು ಹಾರಿ

ಹಡೆದ ಮನೆಯ ಹೊನ್ನು ದೀಪ
ಹಡೆದವ್ವನ ಸಣ್ಣ ರೂಪ
ನಡೆದು ಬಂದಳಪರೂಪ
ಒಡಲಕುಡಿ ! ಬಾ ಸಮೀಪ

---

## ದಾಸಿ

ನಾನು ಕೊಡುವವನೆಂದು
ಹೆಮ್ಮೆಪಡುವುದು ಬೇಡ
ನಾನು ಕೊಡುವವನಲ್ಲ ನೋಡುವವನು
ಕೊಡಿಸುವನು ನನ್ನಿಂದ
ಕೊಡಗೈಯ ದೊರೆ ತಾನು
ಒಬ್ಬನೇ ಜಗದೊಳಗೆ ದಾನಿಯವನು

ಇಂದಿರುವುದೆಲ್ಲವೂ
ಬಂದಿರುವುದೇತಕ್ಕೆ ?
ಎಂದಾದರೊಂದು ದಿನ ಕೊಡುವುದಕ್ಕೆ
ಇಂದು ಕೊಡು ಇದ್ದುದನು
ಮುಂದೆ ಬರುವುದಕಾಗಿ
ಹರಿಯಗೊಡು ನೀನದನು ಹೊಳೆಯಹಾಗೆ

ಕೊಡಲು ಪಾತ್ರರು ಯಾರು
ಎಂಬ ಯೋಚನೆ ಬೇಡ
ಕೊಡಿಸುವಗೆ ಬಿಟ್ಟುಗೊಡು ಅದನು ನೀನು
ಕೊಡುವುದಕೆ ಪಾತ್ರ
ನಾನಾಗಬೇಕೆಂದೆಣಿಸು
ಕೊಡುವ ಹಿರಿಗೆಲಸಕ್ಕೆ ಕರಣ ನೀನು

---

## ಕೌತುಕದ ಕನ್ಯೆ

ಕೌತುಕದ ಕನ್ಯೆ ನೀನೇತಕೇ ಪರಿಯನ್ನ
ನಿಡು ನೋಟ ನಿಲ್ಲಿಸಿ ನೋಡುತಿಹೆ ?
ನೋಟದ ಗೂಡ ಎನ್ನಂತರಂಗವ ಪೊಕ್ಕು
ಮನದ ಕಿವಿಯೊಳೇನ ಹೇಳುತಿಹೆ?

ಈಸು ದಿನಗಳವರೆಗೆ ಮೊಸಲಾಗಿಹ ನನ್ನ
ಮನದ ಮಂದಾರವ ಮೂಸುತಿಹೆ
ಅರೆ ಅರಳಿದ ಆತ್ಮದರವಿಂದ—ಮಕರಂದ
ನನಗೂ ಅರಿಯದೆ ಹೀರುತಿಹೆ

ಮೋಹಿನಿ ರೂಪದ ತಾಳ್ದ ಮೋಹಕ ಬಾಲೆ,
ಏತಕೆ ನೀ ಮಂತ್ರ ಮಾಡುತಿಹೆ ?
ಕಣ್ಣಿಗೆ ಕಾಣದ ಕಣ್ಣ ಕೈಗಳ ನೀಡಿ
ಇನ್ನೇನಭಯವ ಬೇಡುತಿಹೆ

---

## ಅಗಲಿದ ಗೆಳೆಯನಿಗೆ

ಕಣ್ಮುಚ್ಚಿ ಕಣ್ದೆರೆಯುವಷ್ಟರೊಳು ಕಾಣದಾಗಿರುವ
ಹೊಸ ಗೆಳೆಯನೇ ಕೇಳು ಕೇಳು
ಕಣ್ಮುಚ್ಚಿಕೊಂಡರೂ ಕೂಗಿ ಕರೆಯುವೆ ನಿಲ್ಲು
ಕಿವಿಗೊಟ್ಟು ಕೇಳು ಕೇಳು!

ಕಾಲ ಪುರುಷನ ವೇಳೆಗನುಗುಣದಿ ತಪ್ಪದಲೆ
ತಿರುಗುವದು ವಿಶ್ವವಿನ್ನು
ಬಾಳುವದು ಬೀಳುವದು, ನಮ್ಮ ಕೈಯಲ್ಲಿಲ್ಲ
ಬಿಡಬೇಕು ಬನ್ನವನ್ನು !

ಸಾವೆಂಬ ಕನ್ನಿಕೆಗೆ ಮುಪ್ಪು ಮುಟ್ಟುವದಿಲ್ಲ
ಆಯುಷ್ಯದಳತೆಯಿಲ್ಲ !
ಸಾವೆಂಬ ಕನ್ನಿಕೆಯು ಕಡೆತನಕ ತರುಣಿಯೇ–
ರೋಗಗಳ ಬೇಗೆಯಿಲ್ಲ!

ಕರುಣವಿಲ್ಲವೆ ಆವಗೆ ಕಾಲಕಾಲಕೆ ನೀರನೆರೆದು
ಬೆಳೆಸಿರುವ ಈ ಗಿಡದ ಮೇಲೆ
ಭರವಸೆಯನಿಡಬೇಕು ಹಗಲಿರುಳು ನಮ್ಮನ್ನು
ಸಲಹುತಿರುವವನ ಮೇಲೆ!

ತಾನೆ ಹೂಗಳಿಗಾಗಿ ಹಚ್ಚಿರುವ ಬಳ್ಳಿಗಳ
ಮೊಗ್ಗೆಗಳ ಕೊಯ್ವರುಂಟೆ?
ತಾನಾಗಿಯೇ ಬಂದು ತನಗಾಗಿ ತೆರೆದಿರುವ ಕುಸುಮವನು
ಕೊಯ್ಯಲದಕಡ್ಡಿಯುಂಟೆ?

ಕಟ್ಟಿರುವ ಕೈಬಿಟ್ಟು ಕೊಟ್ಟಿದ್ದ ಕೈಕೊಸರಿ ನೆಟ್ಟನೇ
ನೀರಿನೊಳು ಧುಮುಕಿಕೊಂಡೆ!
ಕಟ್ಟಿ ಒಯ್ಯುವ ಕಸುವು ಕುಗ್ಗಿರಲು ನನ್ನನ್ನು ಬಿಟ್ಟು
ನೀನೊಬ್ಬನೇ ಮುಳುಗಿಕೊಂಡೆ!

ಹೋಗಿ ಬಾರೈ ಗೆಳೆಯ ! ಬಾಗಿ ನಮಿಸುವೆ ನಾನು—
ಬೇಗ ನಿಮ್ಮಯ್ಯನೆಡೆಗೆ
ತ್ಯಾಗಿಯೇ, ತಾಯ್ನಾಡಿಗಾಗಿ ತನುವನು ತೊರೆದೆ
ತೆರಳು ಸೌಭಾಗ್ಯದೆಡೆಗೆ

ಕಡೆಯ ಕಾಲಕೆ ಕೂಡ ಕೊಟ್ಟಿರುವ ಕರುಣವನು
ನಾನೆಲ್ಲಿ ಹೂಳಿಯಿಡಲಿ
ಕೊಡಲು ಕಟ್ಟಿದ ಕವನ ಕೊಟ್ಟಿರುವೆ ‘ ಶೇಷಶಾಯಿಯು
ತಾನೆ ಕಾಪಾಡಲಿ !

---



5

## ಸುಖದ ವೃಕ್ಷ

ಹಸಿದು ಹೊಟ್ಟೆಗಿಲ್ಲವೆಂದು
ಕುಸಿದು ಬಾಯಿ ಬಿಡುವ ಜನರ
ಕರುಳು ಸುಡುವ ಒಡಲ ಬೆಂಕಿ
ಕೆರಳಿ, ಬಾನಿಸುದ್ದ ಎದ್ದು,
ಉರಿಯುತಿರಲು, ಅವರ ಬಾಯಿ
ಯಿಂದ ಬೀಸಿ ಬರುವ ಬೆಚ್ಚ
ನುಸಿರು, ಕಿಡಿಗಳನ್ನುಗುಳಿತು.
ಇಂಥ ಕಿಡಿಯನೊಂದು ಎನ್ನ
ಒಡಲು ಒಳಗೆ ಧರಿಸಿತು.

ಬೀಜದಂತೆ ಬಿದ್ದ ಕಿಡಿಯು
ನಾಯ್ದುಕೊಂಡು ತನ್ನ ಮೈಯ
ನೀರನೆರದು ಬೆಳೆದು ಬರುವ
ಬಲವ ಒಲವನಿತ್ತು ಎನ್ನ
ಎದೆಯ ಹೊಲದ ನೆಲದಿ ಬಿತ್ತಿ
ಮರವನಾಗಿ ಮಮತೆ ಬೆಳೆಸಿತು.
ಇದುವೆ ಸುಖದ ವೃಕ್ಷವೆಂದು
ತಾನೆ ಹೆಸರನಿಟ್ಟಿತು.

---

# ಗೆಲುವು ನಮ್ಮದೊಂದೆ ಗುರಿ

ಸುಳ್ಳು ಸತ್ಯ ಇಲ್ಲ ತಥ್ಯ
ಗೆಲುವು ಒಂದೆ ನಮ್ಮ ಗುರಿ
ಒಳ್ಳೆತನವು ಮಳ್ಳತನವು
ಬಲವು ಇದ್ದರಲ್ಲಿ ಸರಿ

ಬಾಳಿದೊಂದು ಸಮರದಂತೆ,
ನುಗ್ಗು ನುಗ್ಗು ಮುಂದಕೆ
ವೇಳೆಗಳೆಯ ಬೇಡ ಸಾಗು
ಬೀಳಬೇಡ ಹಿಂದಕೆ!

ಬಾಳಿಗಿಹುದು ಒಂದೆ ಸೂತ್ರ
ಬಾಳುವುದೇ ಪೂರ್ಣ ಅರ್ಥ
ಗಾಳಿ ಬೀಸುತಿಹುದೆ ಸಾರ್ಥ
ನೀತಿ ನೇತಿ ಎಲ್ಲ ವ್ಯರ್ಥ!

ಜತೆ–ಜೊತೆಗಳನರಸಬೇಡ
    ಹಿತವಹಿತಕೆ ಮರುಗಬೇಡ
ಕ್ರತು ಧರ್ಮವ ತೊರೆಯಬೇಡ
    ‘ ಮಿಜಿ ಮಿಜಿ ’ ನೀ ಮಾಡಬೇಡ

ಬಿದ್ದರೇನು ಮತ್ತೆ ಏಳು
    ಎದ್ದೆನೆಂದು ಒತ್ತಿ ಹೇಳು !
ಗೆದ್ದ ಹೊರತು ಬಾಳು ಹಾಳು
    ಇದ್ದುದೆಲ್ಲ ಗಾಳು ಗೀಳು !

ಆಳುವುದೇ ನಮ್ಮ ಧರ್ಮ
    ಬಾಳುವುದೇ ನಮ್ಮ ಕರ್ಮ
ಬೀಳದಿಹುದೆ ಮೂಲ ಮರ್ಮ
    ಇದನುಳಿದುದು ಬರಿ ಅಧರ್ಮ !

ನಿಂತವರೇ ನೆಲಕೊಡೆಯರು
    ಸಂತೆಯ ಜನ ಉಳಿದವರು
ಚಿಂತಿಸದಿರು ಅವರಿವರು
    ಇಂತಿರುವರೆ ನಮ್ಮವರು !

ಗೆಲವು ಪುರುಷ ತೊಟ್ಟ ಛಲವು
    ನೀತಿ ನಿಯಮ ಇಲ್ಲಿ ಇಹವು ;
ಬಲವು ನಮ್ಮದೊಂದೆ ಅಳವು
    ಅದುವೆ ನಮ್ಮ ಧೀರ ದಳವು !

ಮನುಜ ಕುಲದ ಮೂರ್ತಿ ನೀನು
ಮನುಮನಸಿನ ಸ್ಫೂರ್ತಿ ನೀನು
ಮನುವಂಶಕೆ ಕೀರ್ತಿ ಭಾನು
ಇಲ್ಲ ನಿನಗೆ ಸರಿ ಸಮಾನು !

ನೀನು ಗೆದ್ದ ಗೆಲವು ಮನುಜ-
ರೆತ್ತಿಕೊಳುವ ಅಮೃತ ಫಲವು ;
ನೀನು ಬಿದ್ದು ಎದ್ದ ನೆಲವು
ಇದನು ಬಿತ್ತಿ ಬೆಳೆದ ಹೊಲವು !

ಸುಳ್ಳು ಸತ್ಯ ಇಲ್ಲ ತಥ್ಯ
ಗೆಲವು ಒಂದೆ ನಮ್ಮ ಗುರಿ !
ಒಳ್ಳೆತನವು ಮಳ್ಳತನವು
ಬಲವು ಇದ್ದರಲ್ಲಿ ಸರಿ !

---

## ಒಳಿತು

ನೆಲವ ಪಸರಿಸಿ ಒಳಿತು ಹಬ್ಬಿದೆ ತಾಯತಬ್ಬಿದ ಮಗುವೊಲು
ಬಲವು ನೆಲವನ್ನಾಳಹೊರಟಿದೆ ತುಳಿದು ಒಳಿತಿನ ತಲೆಯನು

ಮೂಕ ತಾಯಿಗೆ ಮೂಕ ಮಗಳು ಸತಿಯ ಮೌನವ ಮೀರಿದೆ
ಲೋಕದೊಳಗಿನ ಪತಿಗಳಂದದಿ ಬಲವು ಸತ್ತ್ವವ ಹೀರಿದೆ

ಕರುಳಕೊರಗನು ಕರುಳೆ ಬಲ್ಲುದು ಎಂಬ ವ್ಯಾಖ್ಯೆಯು ಮೌನಕೆ
ಇರುಳಿಗೇತಕೆ ಹಗಲಚಿಂತೆಯು ಮೀರೆ ಬಲ ದಬ್ಬಾಳಿಕೆ

---

# ಬೆಳಕು-ಕತ್ತಲೆ

ಇರುವುದು ಕತ್ತಲೆ ಬರುವುದು ಬೆಳಕು ನಮ್ಮಯ ಜಗದಲ್ಲಿ
ಇರುವುದು ಬೆಳಕು ಬಾರದು ಕತ್ತಲೆ ಇಂತಹ ಜಗವೆಲ್ಲಿ !

ಪೀಡೆಯ ಪರಿಹಾರಕೆ ಮಾರ್ಗವನು ತೋಡುತಿಹೆವು ನಾವು
ಪೀಡೆಯೆ ನೋಡಲು ಸಿಗದಂತಿರುತಿಹ ನಾಡ ಕಾಣದಿಹೆವು

ಮರವಿನೊಳಿದ್ದು ಅರಿವನು ಗೆದ್ದು ಬಾಳಲು ಹೆಣಗುವೆವು
ಅರಿವಿನೊಳಿದ್ದರೆ ಬಾಳನು ಬೆಳಗುತ ಥಳಥಳ ಹೊಳೆಯುವೆವು

ದೇವನ ದೇಹ ದೇವನ ಮನಸು ದೊರೆವ ಬಗೆಯದೋರು
ದೇವನ ಹಾಡು ಹಾಡುತ ಹಾಡುತ ಮೇಲ ಮೇಲಕೇರು

---

## ಮನಸು ಮತ್ತು ಮಾತು

ಮನಸು ಮಾತುಗಳೆರಡು ಒಂದೆ ಲೋಕದ ವಸ್ತು
ಮನವನರಳಿಸುವ ಕಲೆ ಮಾತಿಗುಂಟು
ಮನಸೋತು ಬಿದ್ದಾಗ ಗದ್ದರಿಸಿ ಎಬ್ಬಿಸುವ
ಘನ ಬಲವು ಮಾತಿನೊಳು ಅಡಗಿ ಉಂಟು

ಮಾತು ಬಲ್ಲುದು ಎಲ್ಲ ಮೌನ ಮನಸಿನ ಸೊಲ್ಲ
ಕೂತಿರುವುದದಕಾಗಿ ಜನುಮ ತೆತ್ತು
ಮಾತು ಮಾತಿಗು ಮನವ ಕುಣಿಸಿ ಮಣಿಸುವ ಜಾಣು
ಮಾತಿಗಲ್ಲದೆ ಮತ್ತೆ ಏತಕುಂಟು

ಮನಸುಗಳು ಎಷ್ಟುಂಟೊ ಅಷ್ಟು ಮಾತುಗಳುಂಟು
ಮನಸು ಮಾತಿಗು ಹೀಗೆ ಬಿಡದ ಗಂಟು
ಮನಸು ಮೇಣದ ಬತ್ತಿ ಮಾತು ಜ್ಯೋತಿಯು ಹೊತ್ತಿ
ಮನೆಯ ಬೆಳಗುವದಿಂತು ಸ್ನೇಹ ತಾನಂಟಿ

ಒಳಗಿದ್ದ ಮನಸದುವೆ ಹೊರಬರಲು ಮಾತಾಯ್ತು
ಮಾತಿಗೆಲ್ಲಿಗೆ ಬಂತು ಬೇರೆ ಅಸ್ತಿತ್ವ
ಕತ್ತಲೆಯ ಗುಹೆಯಲ್ಲಿ ತನ್ನದೇ ಮನೆಯಲ್ಲಿ
ಮನಮಥಿಸೆ ಹೊರಬಂತು ಶಬ್ದತತ್ತ್ವ

ಕೈಸನ್ನೆ ಕಣ್ಸನ್ನೆ ಮನದ ಸಂಕೇತಕ್ಕೆ
ಮೈಸನ್ನೆ ಎಲ್ಲವೂ ಸಾಲದಾಗಿ
ಕಾತರದಿ ಮನನೊಂದು ಬಳಲುತಿರೆ ಖತಿಗೊಂಡು
ಮಾತು ಬಂದಿತು ಮನದ ರೂಪವಾಗಿ

ಜನುಮ ಜನುಮಾಂತರದಿ ಮೌನ ಬೆನ್ನಟ್ಟಿ ಬರೆ
ಆರಳದೆಯೆ ಉಳಿದಿತ್ತು ಮನದ ಮೊಗ್ಗು
ಮನವೆ ಮನುಜನ ಜನ್ಮ ತಾಳಿ ತಾ ಕಣ್ಣು ತೆರೆ
ಮನ ಮಾತ ಸೃಷ್ಟಿಸಿತು. ಜೀವನಕೆ ಹಿಗ್ಗು!

ತನ್ನ ಪ್ರಕೃತಿಗೆ ಒಪ್ಪಿ ಪುರುಷನಿಂದಿರೆ ಅಪ್ಪಿ
ಮನಕುಮುದೆ ನಾಚಿದಳು ಜರಿದು ಸರಿದು
ನನ್ನ ದೇಸಿಮುದಿಲ್ಲಿ ಎಲ್ಲ ನಲ್ಲನದೆಂದು
ಸನ್ನಿಧಿಯ ಸೇರಿದಳು ಮೌನದಲಿ ನಡೆದು

---

# ನೋಯಿಸದಿರು ಮನವ

ನೋಯಿಸದಿರು ಮನವ—
ಮನವೇ ! ನೋಯಿಸದಿರು ಮನವ
ನೊಂದವರು ಬೆಂದವರು ಯಾರೇನೆಂದವರು
ನೋಯಿಸದಿರು ಮನವ
ಮನಮಲ್ಲಿಗೆ ಹೂವು; ಮನವೇ! ಮನ ಮಲ್ಲಿಗೆ ಹೂವು
ದೂರದಿ ಕಂಡು ಪರಿಮಳ ಉಂಡು ತಣಿದು ತೃಪ್ತಿ ಹೊಂದು
ಮನವೇ ತಣಿದು ತೃಪ್ತಿ ಹೊಂದು

ತಾಳಿಕೊಂಡು ಬಾಳು; ಮನವೇ! ತಾಳಿಕೊಂಡು ಬಾಳು
ಬೀಳುತ ಏಳುತ ಜೋಲಿಯ ಹಿಡಿಯುತ ಮುಂದೆ ಮುಂದೆ ಸಾಗು
ಮನವೇ! ಮುಂದೆ ಮುಂದೆ ಸಾಗು

ನುಂಗು ನುಂಗು ನುಂಗು; ಮನವೇ! ನುಂಗು ನುಂಗು ನುಂಗು
ಸಹನೆಯೆ ಭಕ್ತಿ ಸಹನೆಯೆ ಭುಕ್ತಿ ಸಹಿಸಿದಷ್ಟು ಶಕ್ತಿ
ಬರುವುದು ಸಹಿಸಿದಷ್ಟು ಶಕ್ತಿ

ಶ್ರದ್ಧೆಯಿಂದ ಸಾಗು; ಮನವೇ! ಶ್ರದ್ಧೆಯಿಂದ ಸಾಗು
ಹೊರಸವೀಂಟುವ ಹುಳು ಶಂಕೆಯನಳಿ. ನಂಬು ನಂಬು ನಂಬು
ಮನವೇ! ನಂಬು ನಂಬು ನಂಬು

ಸುಖ ದುಃಖವ ತ್ಯಜಿಸು: ಮನವೇ! ಸುಖ ದುಃಖವ ತ್ಯಜಿಸು
ಒಮ್ಮನದಲಿ ನಿಷ್ಕರ್ಮವ ಗೈಯುತ ದೇವನನ್ನು ಭಜಿಸು
ಮನವೇ ದೇವನನ್ನು ಭಜಿಸು

---

# ನನ್ನ ಕನ್ನಡ

ನನ್ನ ಕನ್ನಡವೆಂತು ಬಾಳಿ ಬದುಕೀತು !
ಉನ್ನತದ ಶಿಖರವನ್ನೇರಿ ಮೆರೆದೀತು !

ನುಡಿಯೊಂದೆ ನಾಡೊಂದೆ ಜನವೆಲ್ಲ ಒಂದೆ
ನಡೆಯೊಂದೆ ಗುಡಿಯೊಂದೆ ಮನದಾಳ ಒಂದೆ
ಗುರಿಯೊಂದೆ ಸಿರಿಯೊಂದೆ ಸೌಭಾಗ್ಯ ಒಂದೆ
ಅರಿವೊಂದೆ ಇರುವೊಂದೆ ಜೀವಿತವದೊಂದೆ
ನೆಲವೊಂದೆ ಕುಲವೊಂದೆ ದೈವತವದೊಂದೆ
ಫಲವೊಂದೆ ಬಲವೊಂದೆ ಭವಿತವ್ಯವೊಂದೆ

ಈ ಕನಸು ಮೈಗೊಂಡು ಬರುವ ದಿನವೆಂದು !
ಈ ನನಸು ಫಲಿಸಿ ಬಹ ಮಾಗಿ ದಿನವೆಂದು !

ಕನ್ನಡವ ಎತ್ತಿ ಪದಗೊಳಿಪ ಜನ ಬೇಕು
ಕನ್ನಡವ ಬಿತ್ತಿ ಬೆಳೆ ತರುವ ಜನ ಬೇಕು
ಕನ್ನಡದ ಮಕ್ಕಳಿಗೆ ಕನ್ನಡವೆ ಊಟ
ಕನ್ನಡವೆ ಆಟ, ಕನ್ನಡವೆ ಸಿರಿನೋಟ

ಹೊಲದಿ ದುಡಿವವನಿರಲಿ ಕೂಲಿ ಆಳಾಗಿರಲಿ
ಜಲದ ಒಡಲನು ಅಗಿವ ಅಂಬಿಗನು ಇರಲಿ
ಸೌದೆ ಸೀಳುವನಿರಲಿ ಸೌದೆ ಮಾರುವನಿರಲಿ
ಕೌದೆ ಹೊಲಿಯುವನಿರಲಿ- ಹೊದೆವನಿರಲಿ

ಕಲ್ಲು ಕಡಿವವಸಿರಲಿ ಹುಲ್ಲು ಕೊಯ್ಯುವಸಿರಲಿ
ಬೆಲ್ಲ ಕಡಲೆಯ ಮಾರಿ ಜೀವಿಸುವನಿರಲಿ
ಬಲ್ಲ ಪಂಡಿತಸಿರಲಿ ಮತ್ತೆ ಪಾಮರನಿರಲಿ
ಎಲ್ಲರಲಿ ಕನ್ನಡವೆ ಚಿಮ್ಮುತಿರಲಿ

ನಮಗಿರುವ ಭವಿತವ್ಯ ಕನ್ನಡಕೆ ಇಹುದು
ಸಮವದುವೆ ಅಷ್ಟಾಂಗ ಸಿದ್ಧಿಯುಹುದು
ತಮತಮಗೆ ಕಂಡಿರುವ ಪೌರುಷವು ಬಹುದು
ಅಮರತೆಯು ಬೀರಿ ಚಿರಕಾಲ ಬಾಳುವುದು

ವ್ಯವಹಾರ ವಾಣಿಜ್ಯವಿದರ ಅಡಿಗಲ್ಲು
ವ್ಯವಸಾಯುದಾಕಳಿಗೆ ಹಾಕಿರುವ ಹುಲ್ಲು
ವ್ಯವಧಾನ ಕನ್ನಡದ ಅವಧಾನಿಗಳ ಸೊಲ್ಲು
ವ್ಯಪಹರಿಸಿ ಉಲಿಯುವದು ನಮ್ಮ ಕಿವಿಯುಲ್ಲು

ಕೊರತೆ ಎಂಬುದು ಇಲ್ಲ ನಮ್ಮ ಕನ್ನಡಕೆ
ಒರತೆಯಾಗಿಹುವದುವೆ ನಮ್ಮ ಜೀವಿತಕೆ
ಅರಿತಷ್ಟು ಆಳವಿಹ ಇಂಗಿತವು ಜಗಕೆ
ಸುರಿಸಿ ಸುಜ್ಞಾನವನು ತರುವ ಬೆಳಕೆ

---

# ನಮ್ಮಲ್ಲಿ ದೊರೆಯುವ ಪುಸ್ತಕಗಳು

| | | |
|---|---|---|
| **ಕನ್ನಡ ಮೇಘದೂತ** | ಶ್ರೀ. ದ. ರಾ. ಬೇಂದ್ರೆ ಎಂ. ಎ. | ೧-೦-೦ |
| **ಮುಂಗಾಲ್‌ಪುಟಿಗೆ** | ಶ್ರೀ. ಎನ್. ಕೆ. ಕುಲಕರ್ಣಿ ಎಂ. ಎ. ಬಿಟಿ. | ೧-೧೨-೦ |
| **ಸಾಹಿತ್ಯದಲ್ಲಿ ಪ್ರಗತಿ** | ಪ್ರೊ. ವ್ಹಿ. ಕೆ. ಗೋಕಾಕ ಬಿ. ಎ. ಆಕ್ಸನ್ | ೧-೮-೦ |
| **ಮೈಲುಕಲ್ಲಿನೊಡನೆ ಮಾತುಕತೆಗಳು** | ಶ್ರೀ. ಕೋ. ಶಿ. ಕಾರಂತ | ೧-೪-೦ |
| **ಪರಿಣೀತಾ** | ಶರಚ್ಚಂದ್ರ ಚಟ್ಟೋಪಾಧ್ಯಾಯ | ೧-೦-೦ |
| **ನನ್ನ ಗೀತಗಳು** | ಗೀತಾಪ್ರಿಯ | ೧-೦-೦ |
| **ಗರಿ ೨ನೇ ಆವೃತ್ತಿ** | ಅಂಬಿಕಾತನಯದತ್ತ | ಅಚ್ಚಿನಲ್ಲಿ |

ಎಲ್ಲ ಪುಸ್ತಕಗಳನ್ನೂ ಒಟ್ಟಿನಲ್ಲಿ ತರಿಸಿಕೊಳ್ಳುವವರಿಂದ ಅಂಚೇವೆಚ್ಚ ನಮ್ಮ ತಕ್ಕೊಳ್ಳುವದಿಲ್ಲ ಅಂಥವರು ೭-೮-೦ ಗಳನ್ನೂ ಮನಿಯಾರ್ಡರ ಮಾಡಿ ಹಣ ಕಳಿಸಬೇಕು.

**ಮ್ಯಾನೇಜರ್**

ಸಾಧನ ಮುದ್ರಣಾಲಯ, ಧಾರವಾಡ

---